# ಕನ್ನಡ ಭಾಷಾಭಿವೃದ್ಧಿ

## ಸಾಧನೆ ಮತ್ತು ಮುನ್ನೋಟ

ಸಂಪಾದಕ
ಕೆ.ವಿ. ನಾರಾಯಣ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಭಾಷಾಧ್ಯಯನ ಮಾಲೆ ೮

# ಕನ್ನಡ ಭಾಷಾಭಿವೃದ್ಧಿ

## ಸಾಧನೆ ಮತ್ತು ಮುನ್ನೋಟ

ಸಂಪಾದಕ

**ಕೆ. ವಿ. ನಾರಾಯಣ**



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**KANNADA BHASHABHIVRIDDI**
**Sadhane Mattu Munnota**
Edited by K.V. Narayana
Dept. of Kannada Language Development
Kannada University, Hampi
Published by
The Director, Prasaranga
Kannada University, Hampi
Vidyaranya-583276.
Pages: viii +50, Rs **25/-**
First Impression 1999

**ಪ್ರಕಾಶಕರು**
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩೨೭೬
**ಮುಖಪುಟ ವಿನ್ಯಾಸ**
ಕೆ. ಕೆ. ಮಕಾಳಿ
ಬೆಲೆ ರೂ. ೨೫.೦೦
**ಅಕ್ಷರ ಸಂಯೋಜನೆ**
ರಾಯಲ್ ಗ್ರಾಫಿಕ್ಸ್, ಹೆಚ್. ಪಿ. ಸಿ.
**ಮುದ್ರಣ**
ಲಕ್ಷ್ಮಿ ಮುದ್ರಣಾಲಯ
೧೧೭/೨, ೫ನೇ ಮುಖ್ಯರಸ್ತೆ
ಚಾಮರಾಜಪೇಟೆ
ಬೆಂಗಳೂರು - ೧೮
✆ ೬೬೧೩೧೨೩, ೬೬೧೮೭೫೨

*

# ದೇಸಿಯೊಳ್ ಪುಗುವುದು

ಡಾ. ಎಂ.ಎಂ.ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಶಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ

ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆಯ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ- ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿ ವಹಿಸಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕ ಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಈ ಪ್ರಸಾರಾಂಗದ ಇತ್ತೀಚಿನ ಪ್ರಕಟಣೆಯಾಗಿದೆ 'ಕನ್ನಡ ಭಾಷಾಭಿವೃದ್ಧಿ-ಸಾಧನೆ ಮತ್ತು ಮುನ್ನೋಟ'.

ಭಾಷೆ, ಸಂಸ್ಕೃತಿಯ ಶಬ್ದರೂಪ. ಪ್ರಗತಿ-ವಿಗತಿ ಅದರ ಲಕ್ಷಣಗಳು. ಈ ತಿಳುವಳಿಕೆಯನ್ನು ಭಿತ್ತಿಯಾಗಿಟ್ಟುಕೊಂಡು ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನವಾಗಿದೆ 'ಕನ್ನಡ ಭಾಷಾಭಿವದ್ಧಿ : ಸಾಧನೆ ಮತ್ತು ಮುನ್ನೋಟ'. ಈ ಕೃತಿಯನ್ನು ಅನನ್ಯ ಆಸಕ್ತಿಯಿಂದ ರೂಪಿಸಿದ ಡಾ. ಕೆ. ವಿ. ನಾರಾಯಣ ಅವರಿಗೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ.

❑❑

# ಪ್ರಸ್ತಾವನೆ

## ಕೆ. ವಿ. ನಾರಾಯಣ

ಕನ್ನಡ ಭಾಷಾಭಿವೃದ್ಧಿ ವಿಭಾಗವು ನವೆಂಬರ್ ೯ಆರಲ್ಲಿ ನಡೆಸಿದ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಎಲ್ಲ ಪ್ರಬಂಧಗಳು ಇಲ್ಲಿ ಸಂಕಲಿತವಾಗಿವೆ. ಕನ್ನಡ ಭಾಷಾಭಿವೃದ್ಧಿಯಲ್ಲಿ ಈವರೆಗೆ ಆಗಿರುವ ಸಾಧನೆಗಳನ್ನು ಮತ್ತು ಬರಲಿರುವ ದಿನಗಳಲ್ಲಿ ನಡೆಯಬೇಕಾಗುವ ಕೆಲಸಗಳನ್ನು ಪರಿಶೀಲಿಸುವುದು ಈ ವಿಚಾರ ಸಂಕಿರಣದ ಉದ್ದೇಶವಾಗಿತ್ತು. ಭಾಷಾನೀತಿ, ಭಾಷಾಯೋಜನೆ, ಭಾಷಾಬಳಕೆಗಳು ಭಾಷಾಭಿವೃದ್ಧಿಯ ಮುಖ್ಯ ನೆಲೆಗಳು. ಆಯಾ ನೆಲೆಯನ್ನು ಕುರಿತು ಪ್ರತ್ಯೇಕ ಪ್ರಬಂಧಗಳಿವೆ. ಕನ್ನಡದಂಥ ಭಾಷೆಯು ಭಾಷಾಭಿವೃದ್ಧಿಯ ಸಂದರ್ಭದಲ್ಲಿ ಎದುರಿಸುವ ಇಕ್ಕಟ್ಟುಗಳೆಂದರೆ ಉಪಭಾಷಾ ಪರಿಸ್ಥಿತಿ ಮತ್ತು ದ್ವಿಭಾಷಿಕ ವಾತಾವರಣ. ಭಾಷಾಭಿವೃದ್ಧಿಯು ಎಲ್ಲ ಪರ್ಯಾಯಗಳನ್ನು ಹತ್ತಿಕ್ಕಿ ಪ್ರಮಾಣೀಕರಣದ ಕಡೆಗೆ ದಾಪುಗಾಲಿಡುತ್ತದೆ. ಆದರೆ ಸಾಮಾಜಿಕ ಸ್ಥಿತಿಯು ಅದಕ್ಕೆ ಪೂರಕವಾಗಿ ಇರುವುದಿಲ್ಲ. ಭಾಷೆಯ ವೈವಿಧ್ಯವನ್ನು ಪ್ರಕಟಿಸುವ ಉಪಭಾಷೆಗಳಿಗೆ ಶತಮಾನಗಳ ಬಳಕೆಯಿದೆ. ಬೆಳ ವಣಿಗೆ ಇದೆ. ಈ ವೈವಿಧ್ಯಗಳನ್ನು ಭಾಷಾಭಿವೃದ್ಧಿಯ ಚೌಕಟ್ಟಿಗೆ ತರುವ ಪ್ರಶ್ನೆಯು ಮುಖ್ಯ. ಆ ಬಗೆಗೆ ಒಂದು ಪ್ರಬಂಧ ಇಲ್ಲಿದೆ. ದ್ವಿಭಾಷಿಕತೆ ಇನ್ನೊಂದು ವಾಸ್ತವ. ಕನ್ನಡ ಭಾಷಾ ಭಿವೃದ್ಧಿಯಲ್ಲಿ ತುಳು, ತೆಲುಗು, ಮರಾಠಿ, ಮುಂತಾದ ಭಾಷೆಗಳನ್ನು ಅಳವಡಿಸುವುದು ಹೇಗೆ? ಆ ಭಾಷಿಕರು(ಅವರು ಕನ್ನಡವನ್ನು ಬಲ್ಲವರು) ಈ ಯೋಜನೆಯಲ್ಲಿ ಯಾವ ಪಾತ್ರ ವಹಿಸಬೇಕು ಈ ಎಲ್ಲ ಸಮಸ್ಯೆಗಳನ್ನು ಗಮನಿಸುವುದು ಅವಶ್ಯ. ಆ ಬಗ್ಗೆ ಒಂದು ಪ್ರಬಂಧ ವಿದೆ.

ಕರ್ನಾಟಕದಲ್ಲಿ ಭಾಷಾಭಿವೃದ್ಧಿಯ ಯತ್ನಗಳಿವೆ; ಯಶಸ್ಸುಗಳಿಲ್ಲ. ಅಥವಾ ಇರುವ ಯಶಸ್ಸು ಸೀಮಿತವಾದದ್ದು. ಭಾಷಾಭಿವೃದ್ಧಿ ಯೋಜನೆಗಳು ಹಲವು ಸಾಮಾಜಿಕ ಸಂಗತಿಗಳ ವಿನ್ಯಾಸದಲ್ಲಿ ಬೆರೆತು ರೂಪು ಪಡೆಯಬೇಕು. ಆದರೆ ನಾವು ಭಾಷಾಭಿವೃದ್ಧಿಯನ್ನು ಸ್ವಯಂ ಪೂರ್ಣಘಟನೆ ಎನ್ನುವಂತೆ ಈವರೆಗೆ ವ್ಯವಹರಿಸಿದ್ದೇವೆ. ಇದರಿಂದಾಗಿ ಹಲವಾರು ಏರು ಪೇರುಗಳಾಗಿವೆ. ಸಾಮಾಜಿಕ ಸಂಗತಿಗಳಲ್ಲಿನ ವ್ಯತ್ಯಾಸಗಳು ಭಾಷಾಭಿವೃದ್ಧಿಯ ಗುರಿಸಾಧನೆ ಯಾಗದಂತೆ ಮಾಡಿವೆ. ಅಂದರೆ ಭಾಷಾಯೋಜನೆಗಳು ದಿಕ್ಕು ತಪ್ಪಿದಂತಾಗಿವೆ. ಇದಲ್ಲದೆ ರಾಜ್ಯಾಂಗದಲ್ಲಿ ಅಡಕಗೊಂಡಿರುವ ಮತ್ತು ಆಡಳಿತಾತ್ಮಕವಾಗಿ ಜಾರಿಯಲ್ಲಿರುವ ಕೆಲವು ವಿಪರ್ಯಾಸಗಳಿಂದಾಗಿಯೂ ಭಾಷಾಭಿವೃದ್ಧಿಯು ಯೋಜಿತ ರೀತಿಯಲ್ಲಿ ಸಾಗುತ್ತಿಲ್ಲ. ಇಂಗ್ಲಿಷಿಗೆ ದೊರಕಿರುವ ಶಾಸನಬದ್ಧ ಸ್ಥಾನಮಾನಗಳಿಂದಾಗಿ ಕನ್ನಡದ ಅಭಿವೃದ್ಧಿ ಎನ್ನುವುದು

ಯಜಮಾನನ ಎದುರು ನಡೆಸುವ ಅಧೀನ ಚಟುವಟಿಕೆ ಎಂಬಂತಾಗಿದೆ. ಮೀರುವ ಗುಣಗಳು ನಮ್ಮ ಯೋಜನೆಗಳಿಗೆ ಇಲ್ಲ; ಪಾಲಿಸುವ ನಿಯತ್ತು ಮಾತ್ರ ಧಾರಾಳವಾಗಿದೆ. ಇದರಿಂದಲೂ ಉದ್ದೇಶಿತ ಗುರಿಸಾಧ್ಯವಾಗಿಲ್ಲ.

ಈಗ ಯಾವ ಮಾತಾಡಿದರೂ ತಪ್ಪದೇ ಜಾಗತೀಕರಣ, ಉದಾರೀಕರಣ ಮುಂತಾದ ಪದಗಳು ಬಂದು ಸೇರುತ್ತಿವೆ. ಅವೆಲ್ಲವೂ ನಮ್ಮ ಪ್ರಜ್ಞೆ, ತಿಳುವಳಿಕೆಯ ಭಾಗವಾಗಿವೆಯೋ ಅನುಭವವಾಗಿವೆಯೋ ತಿಳಿಯದು. ಕನ್ನಡದ ಮಟ್ಟಿಗೆ ಹೇಳುವುದಾದರೆ ಇದು ಈಗ ಬೇಕು ಬೇಡಗಳ ನೆಲೆಯಲ್ಲಿ ಉಳಿದಿಲ್ಲ. ದಿನದಿನದ ಹೋರಾಟವಾಗಿದೆ. ಉಳಿಯುವುದೇನು ಕಳೆದು ಹೋಗುವುದೇನು ಎಂಬ ಲೆಕ್ಕಾಚಾರವು ತಪ್ಪಾಗುತ್ತಿದೆ. ಇದಕ್ಕೆ ಮುಖ್ಯವಾಗಿ ನಾವು ಭಾಷೆ ಯನ್ನು, ಅದು ಸಂಸ್ಕೃತಿಯೊಡನೆ ಹೊಂದಿರುವ ಸಂಬಂಧವನ್ನು ಸರಿಯಾಗಿ ಅರಿತಿಲ್ಲದಿರು ವುದೂ ಒಂದು ಕಾರಣವಾಗಿದೆ. ಭಾಷಾಸಮುದಾಯಗಳ ಚಹರೆಗಳು ಎಡೆಬಿಡದ ಧಾಳಿ ಗಳಲ್ಲೂ ಉಳಿಯುವ ಕ್ರಮವನ್ನು ಅಭ್ಯಾಸ ಮಾಡಬೇಕು. ಅಂಥ ಹುನ್ನಾರಗಳನ್ನು, ತಂತ್ರ ಗಳನ್ನು ಬಳಸಬೇಕು. ಭಾಷಾಭಿವೃದ್ಧಿಗೆ ಯೋಜನೆ ಎನ್ನುವುದೇನೂ ಇಲ್ಲ ಎಂದು ವಾದಿಸುವ ವರೂ ಇದ್ದಾರೆ. ಅಭಿವೃದ್ಧಿ ಎನ್ನುವುದು ಜೀವಕ್ರಿಯೆಯಂತೆ ಯೋಜಿತವಾದರೂ ಬಾಹ್ಯ ನಿಯಂತ್ರಣಕ್ಕೆ ದಕ್ಕುವುದಲ್ಲವೆಂಬ ನಿಲುವನ್ನು ಹೊಂದಿರುವವರಿದ್ದಾರೆ. ಸಮಾಜದ ವಿವಿಧ ಅಂಗಗಳ ಜತೆಗೂ ಭಾಷೆ ತಂತಾನೇ ಬೆಳೆಯುತ್ತದೆ ಬಳಕೆಯಾಗುತ್ತದೆ ಎಂಬ ಈ ವಾದವನ್ನು ಪೂರ್ಣವಾಗಿ ಅಲ್ಲಗೆಳೆಯಲು ಬರುವುದಿಲ್ಲ. ಆದರೆ ಹೀಗಾದಾಗಲೂ ಬೆಳವಣಿಗೆಗೆ ಅವಶ್ಯ ವಾದ ವಾತಾವರಣವನ್ನು ರೂಪಿಸುವುದು ಖಂಡಿತವಾಗಿ ನಡೆಯಬೇಕು. ಇದಕ್ಕಾಗಿ ಬೆಳವಣಿಗೆ ಯಗತಿ, ದಿಕ್ಕುಗಳನ್ನು ಅರಿತಿರಬೇಕಾಗುತ್ತದೆ. ಎಂದರೆ ಭಾಷಾಭಿವೃದ್ಧಿ ಎನ್ನುವುದು ಕೇವಲ ಕಾಲ್ಪನಿಕ ಎಂದು ತಳ್ಳಿಹಾಕುವಂತಿಲ್ಲ. ಈ ಕ್ಷೇತ್ರದಲ್ಲಿ ತಜ್ಞತೆ ಎನ್ನುವುದನ್ನು ಬೇರೆ ರೀತಿಯಲ್ಲಿ ಅರಿಯಬೇಕು. ಇದು ತಾಂತ್ರಿಕತೆಯ, ವಿಜ್ಞಾನದ ವಲಯವಲ್ಲ; ನಿರಂತರ ಚಲನ ಶೀಲತೆಯ ವಲಯದ ಮೂಲಕ ಯುಕ್ತಾಯುಕ್ತತೆಗಳನ್ನು ಚರ್ಚಿಸುವುದು, ತಕ್ಕ ನಿರ್ಬಂಧಗಳನ್ನು ರಚಿಸುವುದು. ಬೇಕಾದ ಪೂರಕ ನೆಲೆಗಳನ್ನು ಕಲ್ಪಸುವುದು ಇವೆಲ್ಲವೂ ಈ ತಜ್ಞತೆಯ ಭಾಗಗಳಾಗಿವೆ.

ಕರ್ನಾಟಕದಲ್ಲಿ ಭಾಷಾತಜ್ಞತೆ ಎನ್ನುವುದು ಹೀಗೆ ಭಾಷಾಭಿವೃದ್ಧಿಯ ಭಾಗವಾಗಿ ಬೆಳೆಯುತ್ತಿಲ್ಲ. ಯೋಜಕರೂ ತಜ್ಞತೆಯನ್ನು ಮೇಲೆ ಹೇಳಿದ ಬಗೆಯಲ್ಲಿ ಪ್ರಯುಕ್ತಗೊಳಿ ಸಿಲ್ಲ. ಇದೊಂದು ವಿಚಿತ್ರ ವಾತಾವರಣ. ನಮ್ಮ ಹಲವು ಜ್ಞಾನಶಿಸ್ತುಗಳ ಸಮಸ್ಯೆಯೇ ಇಲ್ಲೂ ಮುಂದುವರೆದಿದೆ. ಮುಂದಿನ ದಿನಗಳಲ್ಲಾದರೂ ಬದಲಾವಣೆಗಳಾದಾವೆಂದು ಆಶಿಸು ವುದೇ ನನ್ನ ಕೆಲಸ.

ಈ ವಿಚಾರ ಸಂಕಿರಣಕ್ಕೆ ಒತ್ತಾಸೆಯಾದ ಮಾನ್ಯ ಕುಲಪತಿ ಡಾ. ಎಂ. ಎಂ. ಕಲಬುರ್ಗಿ ಯವರಿಗೆ, ಅಭ್ಯಾಸಪೂರ್ಣ ಪ್ರಬಂಧಗಳನ್ನು ಬರೆದುಕೊಟ್ಟ ಎಲ್ಲ ಅಧ್ಯಯನಶೀಲರಿಗೆ ಮತ್ತು ಈ ಸಂಕಲನವನ್ನು ಪ್ರಕಟಿಸುತ್ತಿರುವ ಪ್ರಸಾರಾಂಗದ ಅಧಿಕಾರಿಗಳಿಗೆ ವಂದನೆಗಳು.

## ಪರಿವಿಡಿ

# ಕರ್ನಾಟಕದ ಭಾಷಾನೀತಿ

**ಹೇಮಲತಾ ಮಹಿಷಿ**

'ಭಾಷೆ' ಮಾನವನ ಒಂದು ಅದ್ಭುತ ಆವಿಷ್ಕಾರ. ಜಗತ್ತಿನಲ್ಲಿ ಒಟ್ಟು ೬೦೦೦ ಭಾಷೆಗಳಿವೆ ಎಂದು ಅಂದಾಜು ಮಾಡಲಾಗಿದೆ. ಭಾರತ ದೇಶವೊಂದರಲ್ಲೇ ಸಂವಿಧಾನದ ಎಂಟನೆಯ ಪರಿಶಿಷ್ಟದಲ್ಲಿ ಮಾನ್ಯತೆ ಪಡೆದ ೧೮ ಭಾಷೆಗಳಲ್ಲದೇ ಅದರ ಹೊರಗೂ ಜನಗಳು ತಮ್ಮ ದೈನಂದಿನ ಜೀವನದಲ್ಲಿ ಬಳಸುವ ೧೭೯ ಭಾಷೆಗಳು, ೫೪೪ ಉಪಭಾಷೆ ಗಳು ಮತ್ತು ೩೦೦೦ ಆಡುಭಾಷೆಗಳೂ ಇವೆ ಎಂದರೆ ಆಶ್ಚರ್ಯವಾಗುತ್ತದೆ. ಎಂದರೆ ಪ್ರಪಂಚದ ಒಟ್ಟು ಭಾಷೆಗಳಲ್ಲಿ ಭಾರತದಲ್ಲಿಯೇ ಅರ್ಧಕ್ಕೂ ಹೆಚ್ಚು ಭಾಷೆಗಳಿವೆ.

ಪ್ರತಿಯೊಂದು ಭಾಷೆಗೂ ತನ್ನದೇ ಇತಿಹಾಸವಿರುತ್ತದೆ. ಪ್ರಭಾವ ವಲಯವಿರುತ್ತದೆ. 'ಒಂದು ಭಾಷೆಯ ಇತಿಹಾಸವೆಂದರೆ ಆ ಭಾಷೆಯನ್ನಾಡುವ ಜನಸಮುದಾಯದ ಜೀವನದ ಇತಿಹಾಸ. ಅದನ್ನು ಕಟ್ಟಲು ಪ್ರತಿಯೊಬ್ಬ ಮಾನವನೂ ಒಂದೊಂದು ಕಲ್ಲನ್ನು ತಂದಿರುತ್ತಾನೆ' ಎಂದು ಎಮರ್‌ಸನ್ ಹೇಳುತ್ತಾನೆ. ಭಾಷೆ ಒಂದು ಜನಸಮುದಾಯವನ್ನು ಒಂದುಗೂಡಿಸುತ್ತದೆ. ಸಂಪರ್ಕದ ಸಾಧನವಾಗಿರುತ್ತದೆ. ತಿಳಿವಳಿಕೆಯ ಮತ್ತು ಅಭಿವ್ಯಕ್ತಿಯ ಮಾಧ್ಯಮವಾಗಿರುತ್ತದೆ.

'ಕನ್ನಡ', ಕನ್ನಡನೆಲದ ಭಾಷೆ, ಎರಡು ಸಾವಿರ ವರ್ಷಗಳ ಪರಂಪರೆ ಹೊಂದಿರುವ ಭಾಷೆ. ಕನ್ನಡದ ಅನೇಕ ರಾಜವಂಶಗಳು ಕನ್ನಡಭಾಷೆಯಲ್ಲಿಯೇ ಆಡಳಿತ ನಡೆಸಿದ್ದಾರೆ. ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನ (ಕ್ರಿ.ಶ. ೪೫೦) ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸಿರುವುದರ ಪ್ರಾಚೀನ ಉದಾಹರಣೆಯಾಗಿದೆ. ಇದು ಪೂರ್ವದ ಹಳಗನ್ನಡದಲ್ಲಿದೆ. ಮುಂದೆ ಭಾಷೆಯನ್ನು, ಶಾಸನಗಳಲ್ಲದೇ ನ್ಯಾಯದ ತೀರ್ಪುಗಳಲ್ಲಿಯೂ ಈ ಕನ್ನಡ ರಾಜವಂಶಗಳು ಬಳಸುತ್ತಾ ಹೋದಂತೆ ಕನ್ನಡ ಭಾಷೆಯ ಸ್ವರೂಪವೂ ಬದಲಾಗುತ್ತಾ, ಪರಿಷ್ಕಾರಗೊಳ್ಳುತ್ತಾ ಹೋಯಿತು.

ವಿಜಯನಗರದ ಪತನಾನಂತರ ಕನ್ನಡ ನಾಡಿನ ಭಾಗಗಳು ಬಹುಮನಿ ಸುಲ್ತಾನರ, ಮರಾಠರ ಹಿಡಿತಕ್ಕೆ ಒಳಗಾದಾಗ, ಆಡಳಿತ ಕನ್ನಡದಲ್ಲಿ ಫಾರಸಿ, ಮರಾಠಿ ಪದಗಳು ನುಸುಳಿಕೊಂಡವು. ಹೈದರ್-ಟಿಪ್ಪೂವಿನ ಆಳ್ವಿಕೆಯಲ್ಲಿ ಕನ್ನಡವೂ ಅಧಿಕೃತ ಭಾಷೆಯಾಗಿತ್ತು. ಹೈದ

ರಾಲಿಯು ಆಡಳಿತಕ್ರಮದಲ್ಲಾಗಲೀ, ಆಚರಣೆಗಳಲ್ಲಾಗಲೀ ಯಾವುದೇ ಬದಲಾವಣೆ ಮಾಡ ಬಯಸಲಿಲ್ಲ. ಕನ್ನಡವೇ ಆಡಳಿತ ಭಾಷೆಯಾಗಿ ಕಚೇರಿಗಳಲ್ಲಿ ಅಧಿಕೃತಭಾಷೆಯಾಗಿ ಬಳಕೆಯಾಗುತ್ತಿತ್ತು, ಟಿಪ್ಪೂಕಾಲದಲ್ಲಿಯೂ ಕನ್ನಡದಲ್ಲಿಯೇ ಕಂದಾಯ ಲೆಕ್ಕಗಳನ್ನು ಇಡಲಾಗುತ್ತಿತ್ತು. ಅಗತ್ಯವಿದ್ದಾಗ ಮರಾಠಿ, ಫಾರಸಿ ಭಾಷೆಗಳಿಗೆ ಅನುವಾದ ಮಾಡಲಾಗುತ್ತಿತ್ತು. ಕೆಲವೊಮ್ಮೆ ಶಾಸನಗಳಲ್ಲಿ ಫಾರಸಿ ಒಕ್ಕಣೆಯಿದ್ದರೂ ವಿಷಯ ಕನ್ನಡದಲ್ಲಿ ನಿರೂಪಿತವಾಗಿರುತ್ತಿತ್ತು. ಈ ರೀತಿ, ಬ್ರಿಟಿಷರು ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಳ್ಳುವ ಪೂರ್ವದಲ್ಲಿ ಕನ್ನಡ ನಿರಂತರವಾಗಿ ಕನ್ನಡ ನೆಲದಲ್ಲಿ ಜನಗಳಾಡುವ ಭಾಷೆಯಾಗಲ್ಲದೇ ಆಡಳಿತ ಭಾಷೆಯಾಗಿಯೂ ಬೆಳೆದು ಬಂದಿತ್ತು.

**ಆಂಗ್ಲರ ಆಡಳಿತದಲ್ಲಿ ಭಾಷಾನೀತಿ**

ಬ್ರಿಟಿಷರು ಮೂಲತಃ ವ್ಯಾಪಾರಕ್ಕಾಗಿ ಭಾರತಕ್ಕೆ ಬಂದರೂ, ಕ್ರಮೇಣ ಇಲ್ಲಿಯ ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಂಡರು. ಆಡಳಿತದೃಷ್ಟಿಯಿಂದ ಭಾಷೆಗೆ ಎಷ್ಟೊಂದು ಪ್ರಾಮುಖ್ಯತೆವಿದೆ ಎಂಬುದನ್ನು ಅವರು ಅರಿತಿದ್ದರು. ಆಡಳಿತವು ಸುಗಮವಾಗಿ, ಸಮರ್ಥವಾಗಿ ನಡೆಯ ಬೇಕೆಂದಿದ್ದರೆ ಪ್ರಾದೇಶಿಕ ಭಾಷೆಗೆ ಅಗ್ರಸ್ಥಾನವಿರಬೇಕು, ಪ್ರಾದೇಶಿಕ ಭಾಷಾಜ್ಞಾನವಿಲ್ಲದ ಅಧಿಕಾರಿ ಸರಕಾರಿ ಸೇವಕನಾಗಿರಲು ಅನರ್ಹ ಎಂದು ಅವರು ಭಾವಿಸಿದ್ದರು. ಹಾಗಾಗಿಯೇ ಅನೇಕ ಆಂಗ್ಲ ಅಧಿಕಾರಿಗಳು ಪರಿಶ್ರಮವಹಿಸಿ ಭಾರತೀಯ ಭಾಷೆಗಳನ್ನು ಕಲಿತರು. ಪಾಂಡಿತ್ಯವನ್ನು ಪಡೆದರು. ಭಾರತೀಯ ಸಾಂಸ್ಕೃತಿಕ ಸಂಪತ್ತನ್ನು ಅನಾವರಣಗೊಳಿಸಿದರು. ಕಿಟೆಲ್, ಜಾನ್‌ಮೈಕಲ್, ಡಾ. ಕಾಲ್ಡವೆಲ್, ಬ್ಯೂಲರ್, ರೈಸ್, ಜಾನ್ ಫ್ಲೀಟ್ ಮೊದಲಾದವರು ತಮ್ಮ ಕನ್ನಡದ ಪಾಂಡಿತ್ಯ-ಸಂಶೋಧನೆಗಳ ಮೂಲಕ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದರೆ, ಕಬ್ಬನ್, ಹಡ್ಸನ್, ರಸಲ್, ವಾಲ್ಟರ್ ಇಲಿಯೆಟ್ ಮೊದಲಾದ ಹಲವಾರು ಆಂಗ್ಲ ಅಧಿಕಾರಿಗಳು ಕನ್ನಡದಲ್ಲಿ ಆಡಳಿತ ನಡೆಸಿದರು. ಅನೇಕರು ಅವರಲ್ಲಿ, ಕನ್ನಡ ಭಾಷೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಲ್ಲದೇ ಅಧಿಕೃತ ಕನ್ನಡ ಭಾಷಾಂತರಕಾರರಾಗಿ ಸೇವೆಸಲ್ಲಿಸಿದರು.

ಒಟ್ಟು ಆಡಳಿತದ ಅನುಕೂಲಕ್ಕಾಗಿ ಇಂಗ್ಲಿಶ್ ಭಾಷೆಯನ್ನು ಸಂಪರ್ಕಭಾಷೆಯಾಗಿ ಇಟ್ಟುಕೊಂಡರೂ, ಪ್ರಾದೇಶಿಕ ಮಟ್ಟದಲ್ಲಿ ಪ್ರಾದೇಶಿಕ ಭಾಷೆಯೇ ಪ್ರಮುಖವಾಗಿರಬೇಕು, ಆಡಳಿತ ಭಾಷೆಯಾಗಿರಬೇಕು ಎಂಬುದು ಆಂಗ್ಲರ ನೀತಿಯಾಗಿತ್ತು, "ಪ್ರಾದೇಶಿಕ ಭಾಷೆಗಳು ಈ ದೇಶದ ಜೀವಂತ ಭಾಷೆಗಳು, ಇಂಗ್ಲಿಶ್ ಕೆಲವೇ ಜನರ ಕಲಿಕೆಯ, ಪ್ರಗತಿಯ ಮಾಧ್ಯಮವಾಗಿದೆ. ಆದರೆ ಬಹಳಷ್ಟು ಜನರಿಗೆ ಅದು ಅನ್ಯಭಾಷೆಯೇ ಆಗಿದ್ದು, ಅವರಿಗೆ ಅದನ್ನು ಓದಲು ಬರೆಯಲು ಬರುವುದಿಲ್ಲ" ಎಂದು ಲಾರ್ಡ್‌ಕರ್ಜನ್ ಸರಿಯಾಗಿಯೇ ಗುರುತಿಸಿದ್ದನು.

ಸಹಜವಾಗಿಯೇ, ಹಿಂದೆ ಫಾರಸಿ-ಮರಾಠಿ ಪದಗಳು ಕನ್ನಡದಲ್ಲಿ ಸೇರ್ಪಡೆಯಾದಂತೆ

ಈಗ ಇಂಗ್ಲಿಶ್ ಪದಗಳು, ಪದಸಮುಚ್ಚಯಗಳು ಆಡಳಿತ ಕನ್ನಡ ಭಾಷೆಯಲ್ಲಿ ಸೇರಿ ಭಾಷೆಯ ಬೆಳವಣಿಗೆಗೆ ಕಾರಣವಾದುವು. ಆಡಳಿತದಲ್ಲಿ ಕನ್ನಡದ ಬಳಕೆಗೆ ಅನುಕೂಲವಾಗುವಂತೆ ಪೂರಕ ಸಾಹಿತ್ಯದ ರಚನೆಯಾಯಿತು; ಕನ್ನಡದ ಅನುವಾದಗಳು ಕಾಣಿಸಿಕೊಂಡವು. ಮಸೂದೆಗಳು, ಅಧಿನಿಯಮಗಳು ಕನ್ನಡದಲ್ಲಿಯೇ ರಚನೆಗೊಂಡವು. ರಾಜ್ಯಾಂಗವ್ಯವಸ್ಥೆ, ಕಾನೂನು, ಪ್ರಕಟಣೆ, ನಿಯಮಗಳನ್ನು ಕನ್ನಡಕ್ಕೆ ಅನುವಾದಿಸಿ ಕಚೇರಿಗಳಿಗೆ ಹಂಚಲಾಗು ತ್ತಿತ್ತು. ಅಂದಿನ ಆಡಳಿತ ಕನ್ನಡದ ಸ್ವರೂಪವನ್ನು ಗಮನಿಸಿದಾಗ ಇಂಗ್ಲಿಶ್ ಪದಗಳನ್ನು ಬಳಸುವಲ್ಲಿ ಯಾವುದೇ ಹಿಂಜರಿಕೆ ಕಂಡು ಬರುವುದಿಲ್ಲ. ಅನೇಕ ಕೆಳಹುದ್ದೆಗಳನ್ನು ಪ್ರಾದೇಶಿಕ ಜನರಿಗೇ ಮೀಸಲಿಡಬೇಕೆಂದು ಮತ್ತು ಅಂತಹ ಹುದ್ದೆಗಳಿಗೆ ನೇಮಕವಾಗುವ ವರಿಗೆ ಕನ್ನಡ ಭಾಷೆಯಜ್ಞಾನ ಅಗತ್ಯವಿರಬೇಕೆಂದು ಹೇಳಿರುವ ಅನೇಕ ಸರ್ಕಾರಿ ಜ್ಞಾಪನಗಳು ಲಭಿಸಿವೆ.

ಮೈಸೂರು ಕಮಿಷನ್ ಅಲ್ಲದೇ ಮುಂಬಯಿ ಮತ್ತು ಮದರಾಸ್ ಪ್ರಾಂತಗಳ ಕನ್ನಡ ಪ್ರದೇಶಗಳಲ್ಲೂ ಕನ್ನಡವೇ ಕಚೇರಿ ಭಾಷೆಯಾಗಿತ್ತು. ಆ ಕಾಲದ ಸಾವಿರಾರು ಕಡತಗಳು, ಪತ್ರವ್ಯವಹಾರಗಳು, ಅಧಿಸೂಚನೆಗಳು, ರಾಜ್ಯಪತ್ರಗಳು, ಜ್ಞಾಪನ ಪತ್ರಗಳು, ಸ್ವೀಕೃತಿಗಳು, ಸರ್ಕಾರಿ ಪ್ರಕಟನೆಗಳು, ಕೈಪಿಡಿಗಳು, ನಮೂನೆಗಳು ಇದನ್ನು ರುಜುವಾತುಪಡಿಸುತ್ತವೆ. ಮುಂಬಯಿ ಪ್ರಾಂತದ ಕನ್ನಡ ಪ್ರದೇಶದಲ್ಲಿನ ಮರಾಠಿಭಾಷಾ ಸರ್ಕಾರಿ ನೌಕರರು ಕೆಲ ವೊಮ್ಮೆ ಕನ್ನಡ ಬಳಸಲು ತಕರಾರು ಮಾಡಿದಾಗ, ಕನ್ನಡವನ್ನು ಶೀಘ್ರವಾಗಿ ಕಲಿತು, ಬಳಸಲೇಬೇಕು ಎಂಬ ಶಿಕ್ಷೆಯ ಭಯವನ್ನು ತೋರಿಸಿರುವುದು ಕಂಡುಬರುತ್ತದೆ. ಅನೇಕ ಹುದ್ದೆಗಳಿಗೆ "ಕನ್ನಡ ಬರದೇ ಇರುವ ಅರ್ಜಿ ಕಳುಹಿಸಕೂಡದು"ಎಂದು ಶರತ್ತುಹಾಕಿರು ವುದು ಉಂಟು. ಜನ ಸಾಮಾನ್ಯರು ಕನ್ನಡದಲ್ಲಿಯೇ ತಮ್ಮ ಅರ್ಜಿಗಳನ್ನು ಅಹವಾಲು ಗಳನ್ನು ಸಲ್ಲಿಸುತ್ತಿದ್ದರು. ಮೇಲಧಿಕಾರಿಗಳಿಗೆ ಕಳಿಸುವ ಅವಶ್ಯಕತೆ ಇದ್ದಲ್ಲಿ ಇಂಗ್ಲಿಶ್ ಅನುವಾದವನ್ನು ಅದರೊಂದಿಗೆ ಕಳಿಸಲಾಗುತ್ತಿತ್ತು. ಅರ್ಜಿಗಳ ಮೇಲೆ ಕೈಗೊಂಡ ನಿರ್ಣಯ ಗಳನ್ನು ಅರ್ಜಿದಾರನಿಗೆ ಕನ್ನಡದಲ್ಲಿಯೇ ತಿಳಿಸಲಾಗುತ್ತಿತ್ತು. ಕನ್ನಡದಲ್ಲಿಲ್ಲದ ಅರ್ಜಿ ಗಳನ್ನು ತಿರಸ್ಕರಿಸಲಾಗುವುದು ಎಂದು ಹೇಳಿದ ಉದಾಹರಣೆಗಳು ಇವೆ.

ಆ ಕಾಲದ ನ್ಯಾಯಾಲಯದ ತೀರ್ಪುಗಳು, ಅಮಲ್ಜಾರಿಗಳು, ಟೆಂಡರ್‌ಗಳು, ಹರಾಜು ನೋಟಿಸ್‌ಗಳು, ಅಧಿನಿಯಮಗಳು ಸಾವಿರಾರು ಸಂಖ್ಯೆಯಲ್ಲಿ ಕನ್ನಡದಲ್ಲಿವೆ. ಆಂಗ್ಲ ನ್ಯಾಯಾಧೀಶರು ಕನ್ನಡದಲ್ಲಿಯೇ ತೀರ್ಪುಕೊಡುವಷ್ಟು ಭಾಷಾಜ್ಞಾನ ಸಂಪಾದಿಸಿರುತ್ತಿದ್ದರು.

ಇಂಗ್ಲಿಷನ್ನು ಕಲಿತು ಸರಕಾರಿ ಕೆಲಸ ಸಂಪಾದಿಸುವುದು, ನಂತರ ಮೇಲಧಿಕಾರಿಗಳನ್ನು ಒಲಿಸಿಕೊಳ್ಳುವುದು ಆ ಕಾಲದ ಮೇಲ್ವರ್ಗದ ವಿದ್ಯಾವಂತರ ಮುಖ್ಯ ಗುರಿಯಾಗಿರುವಂತೆ ಕಂಡುಬರುತ್ತದೆ. ಅವರಿಗೆ ಪ್ರಾದೇಶಿಕ ಭಾಷೆಗಳ ಬಗ್ಗೆ ಕೀಳರಿಮೆ ಇರುತ್ತಿತ್ತು. ತಮ್ಮದೇ ಆದ ವರ್ಗವನ್ನು ಈ ಇಂಗ್ಲಿಶ್ ಕಲಿತ ಸರಕಾರಿ ನೌಕರರು ಸೃಷ್ಟಿಸಿಕೊಂಡು ಜನಸಾಮಾನ್ಯ ರಿಂದ ತಾವು ಭಿನ್ನ, ಅವರಿಗಿಂತ ಶ್ರೇಷ್ಠರು ಎಂದು ತೋರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು.

ಅಂತಹವರಿಗೂ ಪ್ರಾದೇಶಿಕ ಭಾಷೆಗಳ ಮಹತ್ವವನ್ನು ಮತ್ತು ಅವುಗಳನ್ನು ಆಡಳಿತದಲ್ಲಿ ಬಳಸುವುದರಿಂದ ಆಗುವ ಪ್ರಯೋಜನವನ್ನು ವಿವರಿಸುವ ಪ್ರಯತ್ನಗಳನ್ನು ಈ ಆಂಗ್ಲ ಅಧಿಕಾರಿಗಳೇ ಮಾಡಿದ್ದಾರೆ!

## ಸ್ವಾತಂತ್ರ್ಯದ ನಂತರದ ಆಡಳಿತ ಭಾಷಾನೀತಿ

ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಗಾಂಧೀಜಿಯವ 'ಸ್ವದೇಶಿ' ತತ್ತ್ವದ ಪ್ರತಿಪಾದಕ ರಾಗಿದ್ದರು. ಹಾಗಿದ್ದರೂ ಬ್ರಿಟೀಷರು ಭಾರತ ಬಿಟ್ಟು ಹೋದ ಮೇಲೆ, ಅವರ ಭಾಷೆ, ಆಡಳಿತ ವ್ಯವಸ್ಥೆ, ಶಿಕ್ಷಣಪದ್ಧತಿ ಮುಂದುವರಿಯಿತು. ಆದರೆ ಅವರು ಆಡಳಿತದಲ್ಲಿ ಪ್ರಾದೇಶಿಕ ಭಾಷೆಗಳಿಗೆ ಕೊಟ್ಟಿದ್ದ ಒತ್ತು ಕ್ರಮೇಣ ಹೊರಟು ಹೋಯಿತು, 'ಸ್ವದೇಶಿ' ತತ್ತ್ವದ ಪ್ರತಿಪಾದ ಕರಾಗಿದ್ದ ಗಾಂಧೀಜಿ, ಸರದಾರ್ ಪಟೇಲ್‌ರಂತಹವರ ನಿರ್ಗಮನ, ಭಾರತವನ್ನು ಪಾಶ್ಚಾತ್ಯ ಮಾದರಿಯಲ್ಲಿ ಆಧುನಿಕಗೊಳಿಸಲು ಹೊರಟ ನೆಹರೂರವರ 'ದರ್ಶನ'ಭಾರತದ ಸ್ವಾತಂತ್ರ್ಯೋತ್ತರ ಇತಿಹಾಸದ ಮೇಲೆ ಬಲವಾದ ಪರಿಣಾಮ ಬೀರಿವೆ.

೧೯೫೦ರಲ್ಲಿ ಜಾರಿಗೆ ತಂದ ಭಾರತ ಸಂವಿಧಾನದಲ್ಲಿ ಸ್ವತಂತ್ರ ಭಾರತದ ಭಾಷಾನೀತಿ ಯನ್ನು ಘೋಷಿಸಲಾಗಿದೆ. ಅದರ ಮೇರೆಗೆ, ಕೇಂದ್ರದ ಅಧಿಕೃತ ಭಾಷೆಯು ದೇವನಾಗರಿ ಲಿಪಿಯಲ್ಲಿರುವ ಹಿಂದಿಭಾಷೆ ಮತ್ತು ಎಲ್ಲಾ ಅಧಿಕೃತ ಉದ್ದೇಶಗಳಿಗೆ ಅಂತಾರಾಷ್ಟ್ರೀಯ ರೂಪದ ಭಾರತೀಯ ಅಂಕಿಗಳನ್ನು ಬಳಸಬೇಕಾಗುತ್ತದೆ. ಆದರೆ, ಹದಿನೈದು ವರ್ಷಗಳವರೆಗೆ ಇಂಗ್ಲಿಶ್ ಭಾಷೆಯ ಬಳಕೆಯನ್ನು ಮುಂದುವರಿಸತಕ್ಕದ್ದು. ಈ ಅವಧಿಯಲ್ಲಿ ರಾಷ್ಟ್ರಾ ಧ್ಯಕ್ಷರು ಇಂಗ್ಲಿಶ್ ಭಾಷೆಯೊಂದಿಗೆ ಹಿಂದಿಭಾಷೆಯನ್ನು ಮತ್ತು ಅಂತರ್ರಾಷ್ಟ್ರೀಯ ರೂಪದ ಅಂಕಿಗಳೊಂದಿಗೆ ದೇವನಾಗರಿ ಅಂಕಿಯನ್ನು ಬಳಸಲು ಆದೇಶ ನೀಡಬಹುದು. ಹದಿನೈದು ವರ್ಷಗಳನಂತರ ಸಂಸತ್ತು ಕಾನೂನು ಮಾಡುವುದರ ಮೂಲಕ ಇಂಗ್ಲಿಶ್ ಭಾಷೆಯ ಅಥವಾ ದೇವನಾಗರಿ ಅಂಕಿಯ ಬಳಕೆಗೆ ಅವಕಾಶ ಕಲ್ಪಿಸಬಹುದು. ಎಂದರೆ, ೧೫ ವರ್ಷಗಳ ನಂತರ ದೇವನಾಗರಿ ಭಾಷೆಯೇ ಕೇಂದ್ರದ ಅಧಿಕೃತ ಭಾಷೆಯಾಗಿ ಉಳಿಯುತ್ತದೆ ಎಂಬುದು ಗೃಹೀತವಾಗಿದೆ. ಆದರೆ, ಭಾರತದ ಸ್ವಾತಂತ್ರ್ಯದ ಸುವರ್ಣಮಹೋತ್ಸವ ನಡೆದ ಸಂದರ್ಭದಲ್ಲೂ, ಇಂದಿಗೂ ಇಂಗ್ಲಿಶ್‌ಭಾಷೆ ಹಿಂದಿಭಾಷೆಯೊಂದಿಗೆ ಕೇಂದ್ರದ ಅಧಿಕೃತ ಭಾಷೆಯಾಗಿ ಬಳಕೆ ಯಲ್ಲಿದೆ. ಇದಕ್ಕೆ ದಕ್ಷಿಣರಾಜ್ಯಗಳ, ಅದರಲ್ಲೂ ತಮಿಳುನಾಡಿನ ಹಿಂದಿ ವಿರೋಧಿ ಧೋರಣೆಯೇ ಕಾರಣವಾಗಿದೆ.

ಅದೇ ರೀತಿ, ರಾಜ್ಯ-ರಾಜ್ಯಗಳ ನಡುವಿನ ಹಾಗೂ ಕೇಂದ್ರ-ರಾಜ್ಯಗಳ ನಡುವಿನ ಸಂಪ ರ್ಕದ ಅಧಿಕೃತಭಾಷೆ, ಕೇಂದ್ರದ ಅಧಿಕೃತ ಭಾಷೆಯೇ ಆಗಿರತಕ್ಕದ್ದು ಎಂದು ಸಂವಿಧಾನ ವಿಧಿಸುತ್ತದೆ. ಎರಡು ರಾಜ್ಯಗಳ ಪರಸ್ಪರ ಒಪ್ಪಿಗೆಯಿಂದ ಹಿಂದಿಯನ್ನು ಅಧಿಕೃತ ಸಂಪರ್ಕದ ಭಾಷೆಯಾಗಿ ಬಳಸಬಹುದು.

ಪ್ರಾದೇಶಿಕ ಭಾಷೆಗಳಿಗೆ ಸಂಬಂಧಿಸಿದಂತೆ, ರಾಜ್ಯದ ಶಾಸನಸಭೆಯ ಕಾನೂನಿನ ಮೂಲಕ, ತನ್ನ ರಾಜ್ಯದಲ್ಲಿ ಬಳಕೆಯಲ್ಲಿರುವ ಯಾವುದೇ ಭಾಷೆ ಅಥವಾ ಭಾಷೆಗಳನ್ನು ಅಥವಾ ರಾಜ್ಯದ ಹಿಂದಿಯನ್ನು ಆಡಳಿತ ಭಾಷೆಯಾಗಿ ಸ್ವೀಕರಿಸಬಹುದೆಂದು ಸಂವಿಧಾನ ತಿಳಿಸುತ್ತದೆ. ಹಾಗೆ ಕಾನೂನು ಮಾಡುವವರೆಗೆ ಇಂಗ್ಲಿಶ್ ಆಡಳಿತಭಾಷೆಯಾಗಿ ಮುಂದು ವರಿಯುತ್ತದೆ. ಒಂದು ರಾಜ್ಯದ ಜನಸಂಖ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿರುವ ಜನರು ಬೇರೆ ಒಂದು ಭಾಷೆಯನ್ನು ಮಾತನಾಡುತ್ತಿದ್ದು, ಆ ಭಾಷೆಗೂ ಆ ರಾಜ್ಯದ ಅಧಿಕೃತ ಭಾಷೆ ಯಾಗಿ ಮಾನ್ಯತೆ ದೊರಕಬೇಕೆಂದು ಬಯಸಿರುವುದು ತಮಗೆ ಮನವರಿಕೆಯಾದಲ್ಲಿ ರಾಷ್ಟ್ರಾ ಧ್ಯಕ್ಷರು ಈ ಬಗೆಯ ಹಕ್ಕೊತ್ತಾಯದ ಮೇಲೆ, ಸಂಪೂರ್ಣ ರಾಜ್ಯದಲ್ಲಿ ಅಥವಾ ಅದರ ಒಂದು ಭಾಗದಲ್ಲಿ ತಾವು ತಿಳಿಸಿರುವ ನಿರ್ದಿಷ್ಟ ಉದ್ದೇಶಕ್ಕಾಗಿ ಆ ಭಾಷೆಗೂ ಅಧಿಕೃತ ಭಾಷೆಯ ಸ್ಥಾನಮಾನ ಕೊಡಬೇಕೆಂದು, ಆ ರಾಜ್ಯಕ್ಕೆ ನಿರ್ದೇಶನ ನೀಡಬಹುದಾಗಿದೆ. ತಮ್ಮ ತೊಂದರೆಯ ನಿವಾರಣೆಗಾಗಿ ವ್ಯಕ್ತಿಗಳು ಕೇಂದ್ರದ ಅಧಿಕಾರಿಗಳಿಗಾಗಲಿ, ರಾಜ್ಯದ ಅಧಿಕಾರಿ ಗಳಿಗಾಗಲಿ ಅಲ್ಲಿ ಬಳಕೆಯಲ್ಲಿರುವ ಯಾವುದೇ ಭಾಷೆಯಲ್ಲಿ ಮನವಿಯನ್ನು ಸಲ್ಲಿಸ ಬಹುದು. ಹಾಗೆಯೇ, ಭಾಷಾ ಅಲ್ಪಸಂಖ್ಯಾತರಿಗಾಗಿ ಒಬ್ಬ ವಿಶೇಷ ಅಧಿಕಾರಿಯನ್ನು ರಾಷ್ಟ್ರಾ ಧ್ಯಕ್ಷರು ನೇಮಕಗೊಳಿಸತಕ್ಕದ್ದೆಂದು ಸಂವಿಧಾನ ತಿಳಿಸುತ್ತದೆ. ಈ ಅಧಿಕಾರಿಯ ಸಂವಿಧಾನ ದತ್ತವಾದ ಭಾಷಾಅಲ್ಪಸಂಖ್ಯಾತರ ರಕ್ಷಣೆಯ ಸಂಬಂಧವಾಗಿ ವಿಚಾರಣೆ ಮಾಡಿ, ನೇರವಾಗಿ ರಾಷ್ಟ್ರಾಧ್ಯಕ್ಷರಿಗೆ ಆ ವರದಿಯನ್ನು ಸಂಸತ್ತಿನ ಮುಂದೆ ಮಂಡಿಸಲು ಮತ್ತು ಸಂಬಂಧಿಸಿದ ರಾಜ್ಯಕ್ಕೆ ಕಳಿಸಿಕೊಡಲು ಕ್ರಮ ಕೈಗೊಳ್ಳುತ್ತಾರೆ.

ಭಾಷಾ ಅಲ್ಪ ಸಂಖ್ಯಾತರ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಂವಿಧಾನವು, ಪ್ರತಿ ಯೊಂದು ರಾಜ್ಯ ಹಾಗೂ ಸ್ಥಳೀಯ ಸಂಸ್ಥೆಗಳು ಅವರಿಗೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯಲು ಸೂಕ್ತ ಅನುಕೂಲತೆ ಕಲ್ಪಿಸಬೇಕೆಂದು ತಿಳಿಸುತ್ತದೆ. ಭಾಷಾ ಅಲ್ಪಸಂಖ್ಯಾತರು ಈ ಸೌಲಭ್ಯವನ್ನು ಪಡೆಯುವಂತೆ ಮಾಡಲು ರಾಷ್ಟ್ರಾಧ್ಯಕ್ಷರು ಯಾವುದೇ ರಾಜ್ಯಕ್ಕೆ ಸೂಕ್ತ ನಿರ್ದೇಶನಗಳನ್ನೂ ನೀಡಬಹುದಾಗಿದೆ.

ಉಚ್ಚ ಹಾಗೂ ಸರ್ವೋಚ್ಚ ನ್ಯಾಯಾಲಯಗಳಲ್ಲಿ ಬಳಸಬೇಕಾದ ಭಾಷೆಗೆ ಸಂಬಂಧಿಸಿ ದಂತೆ ಸಂವಿಧಾನ ಕೆಲವೊಂದು ನಿಯಮಗಳನ್ನು ರೂಪಿಸಿದೆ. ಇದರಂತೆ, ಸರ್ವೋಚ್ಚ ನ್ಯಾಯಾ ಲಯ ಹಾಗೂ ಉಚ್ಚನ್ಯಾಯಾಲಯಗಳ ಕಾರ್ಯಕಲಾಪಗಳು ಇಂಗ್ಲಿಷಿನಲ್ಲಿಯೇ ನಡೆಯ ತಕ್ಕದ್ದು. ಆದರೆ, ಸಂಸತ್ತು ಕಾನೂನಿನ ಮೂಲಕ ಇದನ್ನು ಬದಲಾಯಿಸಬಹುದು. ಅದೇ ರೀತಿ, ರಾಜ್ಯದ ರಾಜ್ಯಪಾಲರು ರಾಷ್ಟ್ರಾಧ್ಯಕ್ಷರ ಪೂರ್ವಾನುಮತಿ ಪಡೆದು ತಮ್ಮ ರಾಜ್ಯದಲ್ಲಿ ರುವ ಉಚ್ಚನ್ಯಾಯಾಲಯದಲ್ಲಿ ಇಂಗ್ಲಿಷಿನ ಬದಲು ಹಿಂದಿ ಅಥವಾ ಅ ರಾಜ್ಯದ ಅಧಿಕೃತ ಭಾಷೆಯನ್ನು ಕಾರ್ಯಕಲಾಪಗಳಲ್ಲಿ ಬಳಸುವಂತೆ ಅಧಿಕಾರ ನೀಡಬಹುದು. ಕಾರ್ಯಕಲಾಪ ಗಳ ಭಾಷೆ ಯಾವುದೇ ಇದ್ದರೂ ಉಚ್ಚನ್ಯಾಯಾಲಯದ ತೀರ್ಪು, ಡಿಕ್ರಿ ಅಥವಾ ಆದೇಶ ಮಾತ್ರ ಇಂಗ್ಲಿಷಿನಲ್ಲಿಯೇ ಇರತಕ್ಕದ್ದು.

ಶಾಸನ ರಚನೆಯ ಭಾಷೆಯ ಬಗ್ಗೆಯೂ ಸಂವಿಧಾನ ನಿಯಮಗಳನ್ನು ಮಾಡಿದೆ. ಸಂಸತ್ತಿನ ಅಥವಾ ರಾಜ್ಯ ಶಾಸನಸಭೆಯ ಯಾವುದೇ ಸದನದಲ್ಲಿ ಮಂಡಿಸುವ ಮಸೂದೆಗಳು ಹಾಗೂ ಪಾಸ್ ಮಾಡುವ ಅಧಿನಿಯಮಗಳು, ರಾಷ್ಟ್ರಾಧ್ಯಕ್ಷರು ಅಥವಾ ರಾಜ್ಯಪಾಲರು ಹೊರಡಿಸುವ ಅಧ್ಯಾದೇಶಗಳು (ಆರ್ಡಿನೆನ್ಸ್) ಹಾಗೂ ಸಂವಿಧಾನದ ಅಥವಾ ಯಾವುದೇ ಕಾನೂನಿನಡಿ ಮಾಡಲಾಗುವ ಆದೇಶಗಳು, ನಿಯಮಗಳು, (ರೆಗ್ಯುಲೇಶನ್) ಮತ್ತು ಬೈಲಾಗಳ ಅಧಿಕೃತ ಪಾಠಗಳು ಇಂಗ್ಲಿಷಿನಲ್ಲಿಯೇ ಇರತಕ್ಕದ್ದು. ಆದರೆ, ಯಾವುದೇ ರಾಜ್ಯದ ಶಾಸನಸಭೆ ಈ ಉದ್ದೇಶಗಳಿಗಾಗಿ ಇಂಗ್ಲಿಷಿನ ಬದಲು ಬೇರೆಯ ಭಾಷೆಯ ಬಳಕೆಗೆ ಅನು ಮೋದನೆ ಕೊಟ್ಟಿದ್ದಲ್ಲಿ, ಆ ಭಾಷೆಯಲ್ಲಿ ಮಸೂದೆ, ಕಾನೂನು, ಆದೇಶ, ನಿಯಮ, ಅಧ್ಯಾದೇಶ ಇತ್ಯಾದಿಗಳನ್ನು ರಚಿಸಬಹುದು. ಆದರೆ, ರಾಜ್ಯಪಾಲರ ಅಧಿಕಾರದ ಮೇರೆಗೆ ಪ್ರಕಟಿಸಿದ ಅವುಗಳ ಇಂಗ್ಲಿಷಿನ ಭಾಷಾಂತರವೇ ಅಧಿಕೃತ ಪಠ್ಯವಾಗಿರುತ್ತದೆ. ಸಂವಿಧಾನ ಜಾರಿಗೆ ಬಂದ ಹದಿನೈದು ವರ್ಷಗಳವರೆಗೆ ರಾಷ್ಟ್ರಾಧ್ಯಕ್ಷರ ಪೂರ್ವಾನುಮತಿಯಿಲ್ಲದೇ ಇದನ್ನು ಬಿಟ್ಟು ಉಳಿದಂತೆ ರಾಜ್ಯದ ಶಾಸನಸಭೆಯ ಕಾರ್ಯಕಲಾಪಗಳನ್ನು ಆ ರಾಜ್ಯದ ಅಧಿಕೃತ ಭಾಷೆ ಅಥವಾ ಹಿಂದಿ ಅಥವಾ ಇಂಗ್ಲಿಷಿನಲ್ಲಿ ನಡೆಸಬೇಕಾಗುತ್ತದೆ. ಇದಾವುದೇ ಭಾಷೆಯಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಲು ಸಾಧ್ಯವಿಲ್ಲದ ಸದಸ್ಯರಿಗೆ ವಿಧಾನಸಭೆ/ವಿಧಾನ ಪರಿಷತ್ತಿನ ಸಭಾಧ್ಯಕ್ಷರು ಅವರ ಮಾತೃಭಾಷೆ ಯಲ್ಲಿ ಸದನವನ್ನು ಉದ್ದೇಶಿಸಿ ಮಾತ ನಾಡಲು ಅನುಮತಿ ನೀಡಬಹುದಾಗಿದೆ. ಸಂವಿಧಾನ ಜಾರಿಗೆ ಬಂದ ಹದಿನೈದು ವರ್ಷಗಳ ನಂತರ, ರಾಜ್ಯ ಶಾಸನಸಭೆ ಈ ಬಗ್ಗೆ ಅಷ್ಟರಲ್ಲಿ ಏನೊಂದು ನೀತಿಯನ್ನು ಅಳವಡಿಸಿಕೊಳ್ಳ ದಿದ್ದಲ್ಲಿ, ಇಂಗ್ಲಿಷಿನಲ್ಲಿ ಶಾಸನಸಭೆಯ ಕಾರ್ಯ ಕಲಾಪ ನಡೆಸಬಹುದೆನ್ನುವ ನಿಯಮವು ತನ್ನಿಂದತಾನೇ ಹೊರಟುಹೋಗುತ್ತದೆ.

ಆಡಳಿತ, ಶಿಕ್ಷಣ, ಶಾಸಕಾಂಗ, ನ್ಯಾಯಾಂಗಗಳ ಭಾಷಾನೀತಿಯನ್ನು ಸಂವಿಧಾನ ಈ ರೀತಿ ರೂಪಿಸಿರುವುದರೊಂದಿಗೆ ತನ್ನ ೨೯ ಮತ್ತು ೩೦ನೇ ಅನುಚ್ಛೇದದಲ್ಲಿ ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರಿಗೆ ಕೆಲವೊಂದು ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ. ೨೯ನೇ ಅನುಚ್ಛೇದದ ಅನುಸಾರ, ನಮ್ಮ ದೇಶದಲ್ಲಿ ನೆಲಸಿರುವ ಯಾವುದೇ ನಿರ್ದಿಷ್ಟ ಭಾಷೆ, ಲಿಪಿ, ಸಂಸ್ಕೃತಿಯನ್ನು ಹೊಂದಿರುವ ಜನಸಮುದಾಯವು ಅವುಗಳನ್ನು ಕಾಪಾಡಿಕೊಳ್ಳಲು ಮೂಲಭೂತ ಹಕ್ಕನ್ನು ಹೊಂದಿರುತ್ತದೆ. ಮತ್ತು ಕೇವಲ ಧರ್ಮ, ಜನಾಂಗ, ಜಾತಿ, ಭಾಷೆಯ ಆಧಾರದ ಮೇಲೆ ರಾಜ್ಯವು ನಿರ್ವಹಣೆ ಮಾಡುವ ಶಿಕ್ಷಣಸಂಸ್ಥೆಗಳಲ್ಲಿ ಮತ್ತು ರಾಜ್ಯನಿಧಿಯಿಂದ ಸಹಾಯ ಪಡೆಯುವ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶವನ್ನು ನಿರಾಕರಿಸಲಾಗು ವುದು,

೩೦ನೇ ಅನುಚ್ಛೇದದ ಅನುಸಾರ, ಎಲ್ಲಾ ಮತೀಯ ಹಾಗೂ ಭಾಷಾ ಅಲ್ಪಸಂಖ್ಯಾತರಿಗೆ ತಮ್ಮ ಆಯ್ಕೆಯ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಲು ಮತ್ತು ಆಡಳಿತ ನೋಡಿಕೊಳ್ಳಲು ಮೂಲ ಭೂತ ಹಕ್ಕಿದೆ. ರಾಜ್ಯವು ಸಹಾಯಧನ ನೀಡುವಾಗ ಈ ಆಧಾರದ ಮೇಲೆ ಭೇಧ ಭಾವ

ತೋರಲಾಗದು. ಹಾಗೆಯೇ, ಇಂತಹ ಸಂಸ್ಥೆಗಳ ಆಸ್ತಿಪಾಸ್ತಿಗಳನ್ನು ಕಡ್ಡಾಯವಾಗಿ ಸ್ವಾಧೀನ ಪಡಿಸಿಕೊಳ್ಳುವಾಗಲೂ ಅಲ್ಪಸಂಖ್ಯಾತರ ಈ ಯಾವುದೇ ಹಕ್ಕಿಗೆ ಚ್ಯುತಿ ಬರದಂತೆ ನೋಡಿಕೊಳ್ಳ ಬೇಕಾಗುತ್ತದೆ.

ಸಂವಿಧಾನ ವಿಧಿಸಿರುವ ಈ ಭಾಷಾ ನೀತಿಯ ಚೌಕಟ್ಟಿನಲ್ಲಿಯೇ ಪ್ರತಿಯೊಂದು ರಾಜ್ಯ ಹಾಗೂ ಕೇಂದ್ರ ಕಾರ್ಯನಿರ್ವಹಿಸಬೇಕಾಗುತ್ತದೆ, ಕಾರ್ಯನೀತಿ ರೂಪಿಸಿಕೊಳ್ಳಬೇಕಾಗುತ್ತದೆ. ಇಲ್ಲವಾದರೆ, ಅವುಗಳ ಕಾರ್ಯನೀತಿ, ಕಾರ್ಯನಿರ್ವಹಣೆ ಸಂವಿಧಾನಬಾಹಿರ ಎಂದು ನ್ಯಾಯಾಲಯಗಳಲ್ಲಿ ಪ್ರಶ್ನಿತೂಗುತ್ತದೆ, ತಳ್ಳಿಹಾಕಲ್ಪಡುತ್ತವೆ. ಈ ಮೂಲಭೂತ ನೀತಿ ಯಲ್ಲಿ ಬದಲಾವಣೆಯಾಗಬೇಕಿದ್ದಲ್ಲಿ ಸಂವಿಧಾನ ತಿದ್ದುಪಡಿ ಅವಶ್ಯಕವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಈವರೆಗಿನ ಭಾಷಾನೀತಿಯನ್ನು ವಿಶ್ಲೇಷಿಸಬೇಕಾಗು ತ್ತದೆ.

**ಕರ್ನಾಟಕ ರಾಜ್ಯದ ಭಾಷಾನೀತಿಯ ಇತಿಹಾಸ**

ಸಂವಿಧಾನದ ೩೪೫ನೇ ಅನುಚ್ಛೇದದ ಅನುಸಾರ, ೧೯೫೦ರಲ್ಲಿ ಸಂವಿಧಾನ ಜಾರಿಗೆ ಬಂದ ಕೂಡಲೇ ರಾಜ್ಯಗಳಿಗೆ ತಮ್ಮ ತಮ್ಮ ರಾಜ್ಯಗಳ ಅಧಿಕೃತ ಆಡಳಿತ ಭಾಷೆಯ ಬಗ್ಗೆ ಕಾನೂನು ಮಾಡಲು ಅವಕಾಶವಿತ್ತು. ಆದರೆ, ನಮ್ಮ ರಾಜ್ಯದಲ್ಲಿ ಈ ಬಗ್ಗೆ ಕಾನೂನು ಜಾರಿಗೆ ಬಂದದ್ದು ೧೯೬೩ರಲ್ಲಿ! ೧೯೬೩ ಅಕ್ಟೋಬರ್ ೫ನೇ ದಿನಾಂಕದಂದು ಜಾರಿಗೆ ಬಂದ ಕರ್ನಾಟಕ ರಾಜಭಾಷಾ ಅಧಿನಿಯಮವು ಮೊದಲಬಾರಿಗೆ ಕರ್ನಾಟಕ ರಾಜ್ಯದ ಭಾಷಾ ನೀತಿಯನ್ನು ಘೋಷಿಸುತ್ತದೆ. ಸಂವಿಧಾನ ಜಾರಿಗೆ ಬಂದ ೧೫ ವರ್ಷಗಳವರೆಗೆ ಈ ಬಗ್ಗೆ ಮಸೂದೆ ಮಂಡಿಸಬಾರದೆಂಬ ಅಧಿನಿಯಮ ಮಾಡಬಾರದೆಂಬ, ೩೪೩ ಮತ್ತು ೩೪೮ನೇ ಅನುಚ್ಛೇದಗಳಲ್ಲಿ ಇರುವ ನಿಷೇಧವು ಸಂಸತ್ತಿಗೆ ಮಾತ್ರ ಅನ್ವಯಿಸುತ್ತದೆಯೇ ಹೊರತು ರಾಜ್ಯ ಶಾಸನಸಭೆಗಳಿಗೆ ಅನ್ವಯಿಸುವುದಿಲ್ಲ ಎನ್ನುವುದನ್ನು ಇಲ್ಲಿ ಗಮನಿಸಿದಂತೆ ಕಾಣುವುದಿಲ್ಲ. ಅಲ್ಲದೇ, ೧೫ ವರ್ಷಗಳ ನಂತರ (ಕ್ರಿ.ಶ.೧೯೬೫ರ ನಂತರ) ಯಾವುದೇ ಕಾನೂನನ್ನು ರಾಜ್ಯಗಳು ಮಾಡಿರದಿದ್ದಲ್ಲಿ ಶಾಸನಸಭೆಗಳ ಕಾರ್ಯಕಲಾಪದಲ್ಲಿ ಇಂಗ್ಲಿಷನ್ನು ಬಳಸು ವಂತಿಲ್ಲ ಎಂದು ೨೧೦ನೇ ಅನುಚ್ಛೇದ ತಿಳಿಸುವುದರಿಂದ ಇಂಗ್ಲಿಷನ್ನು ಉಳಿಸಿಕೊಳ್ಳುವುದ ಕ್ಕಾಗಿಯೇ ಈ ರಾಜಾಭಾಷಾ ಅಧಿನಿಯಮವನ್ನು ೧೯೬೩ರಲ್ಲಿ ಮಾಡಿರುವಂತೆ ಭಾಸವಾಗಿರು ತ್ತದೆ. ಈ ಅಧಿನಿಯಮದ ಮುನ್ನುಡಿಯನ್ನು ಗಮನವಿಟ್ಟು ಓದಿದರೆ ಇದು ಸ್ಪಷ್ಟವಾಗುತ್ತದೆ.

"ಸಂವಿಧಾನವು ಪ್ರಾರಂಭವಾದಾಗಿನಿಂದ ಹದಿನೈದು ವರ್ಷಗಳ ಅವಧಿಯು ಗತಿಸಿದ ತರುವಾಯ, ಕರ್ನಾಟಕ ರಾಜ್ಯದ ಸರ್ಕಾರಿ ಉದ್ದೇಶಗಳಿಗಾಗಿ ಉಪಯೋಗಿಸಬೇಕಾದ ಭಾಷೆ ಯಿಂದ ಕನ್ನಡವನ್ನು ಅಂಗೀಕರಿಸುವುದಕ್ಕಾಗಿ ಮತ್ತು ರಾಜ್ಯದ ವಿಧಾನಮಂಡಲದ ವ್ಯವಹಾರ ಗಳ ನಿರ್ವಹಣೆಗಾಗಿ ಇಂಗ್ಲಿಷಿನ ಉಪಯೋಗವನ್ನು ಮುಂದುವರಿಸುವುದಕ್ಕಾಗಿ ಉಪಬಂಧಿ ಸುವುದು ಯುಕ್ತವಾಗಿರುವುದರಿಂದ" ಈ ಅಧಿನಿಯಮವನ್ನು ಮಾಡಲಾಗಿದೆ ಎಂದು ಅದರ ಮುನ್ನುಡಿ ತಿಳಿಸುತ್ತದೆ.

"ಕನ್ನಡವು ಮೈಸೂರು ರಾಜ್ಯದ ರಾಜಭಾಷೆಯಾಗಿ ಇರತಕ್ಕದ್ದು" ಎಂದು ಈ ಅಧಿನಿಯಮ ಘೋಷಿಸುತ್ತದೆ.

"ಸರ್ಕಾರವು ಅನ್ಯಥಾ ನಿರ್ದೇಶಿಸುವವರೆಗೆ, ಈ ಅಧಿನಿಯಮವು ಪ್ರಾರಂಭವಾಗುವ ಮುಂಚೆ ಯಾವ ಸರ್ಕಾರಿ ಉದ್ದೇಶಗಳಿಗಾಗಿ ಇಂಗ್ಲಿಶ್ ಭಾಷೆಯನ್ನು ಉಪಯೋಗಿಸಲಾಗುತ್ತಿದ್ದಿತೋ ಅವೆಲ್ಲಕ್ಕೂ ಅದನ್ನು ಉಪಯೋಗಿಸುವುದನ್ನು ಮುಂದುವರಿಸತಕ್ಕದ್ದು" ಎಂದೂ ಈ ಅಧಿನಿಯಮ ವಿಧಿಸುತ್ತದೆ.

ಮುಂದೆ ಕಾಲ-ಕಾಲಕ್ಕೆ ಯಾವ-ಯಾವ ಅಧಿಕೃತ ಉದ್ದೇಶಗಳಿಗಾಗಿ ಕನ್ನಡ ಭಾಷೆಯನ್ನು ಬಳಸಬೇಕೆಂದು ಅಧಿಸೂಚಿಸುವ ಅಧಿಕಾರವನ್ನು ರಾಜ್ಯಸರ್ಕಾರಕ್ಕೆ ಈ ಅಧಿನಿಯಮ ಕೊಟ್ಟಿದೆ.

ಮುಂದೆ ೧೯೮೨ ರಲ್ಲಿ, ೧೯೬೫ರ ಜನವರಿ ೨೬ನೇ ದಿನಾಂಕದಿಂದ ರಾಜ್ಯದ ವಿಧಾನ ಮಂಡಲದ ವ್ಯವಹಾರದ ನಿರ್ವಹಣೆಗಾಗಿ "ಕನ್ನಡ ಮತ್ತು ಹಿಂದಿ"ಯ ಜೊತೆಗೆ ಇಂಗ್ಲಿಶ್ ಭಾಷೆಯ ಉಪಯೋಗವನ್ನು ಮುಂದುವರಿಸುವ ತಿದ್ದುಪಡಿಯನ್ನು ಮಾಡಲಾಗಿದೆ. ಸಂವಿಧಾನ ಜಾರಿಗೆ ಬಂದ ೧೫ ವರ್ಷಗಳ ನಂತರ ಎಲ್ಲಿ ಇಂಗ್ಲಿಷಿನ ಬಳಕೆ ನಿಂತು ಹೋಗಿಬಿಡುತ್ತದೋ ಎನ್ನುವ ಭಯ ಇದರ ಹಿಂದೆ ಇರುವುದು ಕಾಣುತ್ತದೆ. ಏಕೆಂದರೆ, ೧೯೬೩ರಲ್ಲಿ ಈ ಅಧಿ ನಿಯಮವನ್ನು ಜಾರಿಗೆ ತಂದಾಗಲೇ ಈ ಬಗ್ಗೆ ಹೇಳಲಾಗಿದ್ದರೂ, ಪುನಃ ೧೯೮೨ರಲ್ಲಿ ತಿದ್ದು ಪಡಿಯ ಮೂಲಕ ಮತ್ತೊಂದು ಪ್ರಕರಣವನ್ನು ಸೇರಿಸಿ, ಅದನ್ನೇ ಹೇಳಲಾಗಿದೆ. ಅಲ್ಲದೇ, "ರಾಜ್ಯದ ವಿಧಾನ ಮಂಡಲದ ವ್ಯವಹಾರದ ನಿರ್ವಹಣೆಗಾಗಿ ಕನ್ನಡ ಮತ್ತು ಹಿಂದಿಯ ಜೊತೆಗೆ ಇಂಗ್ಲಿಶ್ ಭಾಷೆಯ ಉಪಯೋಗವನ್ನು ಮುಂದುವರಿಸಬಹುದು" ಎಂದು ಹೇಳಿರು ವುದು ಮತ್ತಷ್ಟು ಗೊಂದಲಕ್ಕೆ ಕಾರಣವಾಗಿದೆ. ಏಕೆಂದರೆ, ಸಂವಿಧಾನದ ೨೧೦ನೇ ಅನುಚ್ಛೇದ "ರಾಜ್ಯದ ಅಧಿಕೃತ ಭಾಷೆ ಅಥವಾ ರಾಜ್ಯದ ಭಾಷೆಗಳು ಅಥವಾ ಹಿಂದಿ ಅಥವಾ ಇಂಗ್ಲಿಶ್" ಎಂದು ಹೇಳುತ್ತದೆಯೇ ವಿನಃ "ರಾಜ್ಯದ ಅಧಿಕೃತಭಾಷೆ ಮತ್ತು ಹಿಂದಿ" ಎಂದು ಎಲ್ಲಿಯೂ ಹೇಳಿಲ್ಲ, ನಮ್ಮ ರಾಜ್ಯದ ವಿಧಾನ ಮಂಡಲದ ಕಾರ್ಯಕಲಾಪಗಳನ್ನು "ಕನ್ನಡ ಮತ್ತು ಹಿಂದಿ"ಯಲ್ಲಿ ನಡೆಸುವ ಪ್ರಶ್ನೆ ಎಲ್ಲಿಯೂ ಬಂದಿಲ್ಲ. 'ಮತ್ತು ಹಿಂದಿ' ಪದಗಳ ಉಪಯೋಗ ನಮ್ಮ ಕಾನೂನು ರಚನಾಕಾರರ ನಿರ್ಲಕ್ಷ್ಯವನ್ನು ಅಥವಾ ಸಂವಿಧಾನದ ಬಗ್ಗೆ ಅಜ್ಞಾನವನ್ನು ಸೂಚಿಸುತ್ತದೆ.

೧೯೮೨ ರಲ್ಲಿಯೇ ಮತ್ತೊಂದು ತಿದ್ದುಪಡಿಯನ್ನು ತಂದು, ಕರ್ನಾಟಕ ರಾಜ್ಯವು ರಚಿಸುವ, ಜಾರಿಗೆ ತರುವ ಯಾವುದೇ ಮಸೂದೆ, ಅಧಿನಿಯಮ, ತಿದ್ದುಪಡಿ, ಅಧ್ಯಾದೇಶ, ನಿಯಮ, ವಿನಿಯಮ, ಬೈಲಾಗಳಲ್ಲಿ ಕನ್ನಡ ಭಾಷೆಯನ್ನು ಬಳಸಬಹುದೆಂದು ಈ ಅಧಿನಿಯ ಮಕ್ಕೆ ಸೇರಿಸಲಾಗಿದೆ.

ಇನ್ನೊಂದು ತಿದ್ದುಪಡಿಯಂತೆ, ರಾಜ್ಯಸರ್ಕಾರವು ರಾಜ್ಯಪತ್ರದಲ್ಲಿ ಪ್ರಕಟಿಸಿ ನಿರ್ದಿಷ್ಟಪಡಿಸುವ ದಿನಾಂಕದಿಂದ, ಕೇಂದ್ರದ ಸಂವಿಧಾನದ ೭ನೇ ಪರಿಶಿಷ್ಟದ ೩ನೇ ಪಟ್ಟಿಯ ವಿಷಯ

ಗಳಿಗೆ ಸಂಬಂಧಿಸಿದಂತೆ ಅಥವಾ ರಾಜ್ಯದ ಯಾವುದೇ ಅಧಿನಿಯಮ, ಅಧ್ಯಾದೇಶ, ನಿಯಮಗಳ, ವಿನಿಯಮಗಳ, ಬೈಲಾಗಳ ಕನ್ನಡ ಭಾಷಾಂತರವನ್ನು ಕನ್ನಡಭಾಷೆಯಲ್ಲಿರುವ ಅವುಗಳ ಅಧಿಕೃತ ಪಾಠವೆಂಬುದಾಗಿ ಪರಿಭಾವಿಸಬಹುದಾಗಿದೆ.

ಈ ೧೯೬೩ರ ಅಧಿನಿಯಮ ಹಾಗೂ ಮುಂದಿನ ತಿದ್ದುಪಡಿಗಳನ್ನು ನೋಡುವುದರಿಂದ, ಇಂಗ್ಲಿಶ್ ಅಧಿಕೃತಭಾಷೆಯಾಗಿ ನಮ್ಮ ರಾಜ್ಯದಲ್ಲಿ ಮುಂದುವರಿದಿರುವುದು ಕನ್ನಡವನ್ನು ಆಡಳಿತಭಾಷೆಯಾಗಿ ಘೋಷಿಸಿದ್ದರೂ ಅದೊಂದೇ ಏಕೈಕ ಆಡಳಿತ ಭಾಷೆಯಾಗಿ ಕಡ್ಡಾಯವಾಗಿಲ್ಲದಿರುವುದು ಸ್ಪಷ್ಟವಾಗುತ್ತದೆ. ಆದರೆ, ಕನ್ನಡವನ್ನು ಏಕೈಕ ಆಡಳಿತ ಭಾಷೆಯಾಗಿ ಘೋಷಿಸಲು, ಕಡ್ಡಾಯಪಡಿಸಲು ಯಾವುದೇ ಸಂವಿಧಾನಾತ್ಮಕ ಅಡ್ಡಿ ಇರಲಿಲ್ಲ, ಇರುವುದೆಲ್ಲ ರಾಜಕೀಯ ಇಚ್ಛೆಯಲ್ಲಿ ಎನ್ನುವುದು ಸ್ಪಷ್ಟವಾಗಿದೆ.

"ಇಂಗ್ಲಿಷಿನೊಂದಿಗೆ ಕನ್ನಡವನ್ನು ಬಳಸಬಹುದು" ಎನ್ನುವ ಭಾಷಾಧೋರಣೆಯೇ ಮುಂದೆಲ್ಲಾ ನಮ್ಮ ಸರ್ಕಾರ ಈ ಬಗ್ಗೆ ಕೈಗೊಂಡ ಕ್ರಮಗಳನ್ನು ನಿರ್ಧರಿಸಿತು. ಎಲ್ಲಾ ಹಂತ ಗಳಲ್ಲಿ ತಕ್ಷಣ ಕನ್ನಡವನ್ನು ಜಾರಿಗೆ ತರುವ ನಿರ್ಣಯ ಕೈಗೊಳ್ಳಲಾಯಿತು. ತಮ್ಮ ದಿನ ನಿತ್ಯದ ಕಚೇರಿ ವ್ಯವಹಾರಗಳಲ್ಲಿ ಕನ್ನಡವನ್ನು ಕಡ್ಡಾಯವಾಗಿ ಬಳಸದಿದ್ದರೆ ಸರ್ಕಾರಿ ನೌಕರರು-ಅಧಿಕಾರಿಗಳು ಶಿಸ್ತುಕ್ರಮವನ್ನು ಎದುರಿಸಬೇಕಾಗುತ್ತದೆ ಎಂದು ಹೇಳುವ ಬದಲು, ಕನ್ನಡ ಬಳಸಲು ಅವರ ಮನವೊಲಿಸುವ ಪ್ರಯತ್ನ ಕೈಗೊಳ್ಳಲಾಯಿತು. ಆ ಪ್ರಯತ್ನ ದಲ್ಲಿಯೇ ಅಂದಿನಿಂದ ಇಂದಿನವರೆಗೆ ನೂರಾರು ಅಧಿಸೂಚನೆಗಳನ್ನು, ಸುತ್ತೋಲೆಗಳನ್ನು, ಆದೇಶಗಳನ್ನು ಸರ್ಕಾರ ಆಗಿಂದಾಗ್ಗೆ ಹೊರಡಿಸಿರುವುದನ್ನು ಕಾಣಬಹುದು. ಅದರ ಜೊತೆಗೆ ಕಚೇರಿ ಕೈಪಿಡಿಗಳು, ಪದಕೋಶಗಳು ಮತ್ತಿತರ ಪೂರಕ ಸಾಹಿತ್ಯದ ರಚನೆ, ಅಧಿಕಾರಿಗಳಿಗೆ-ನೌಕರವರ್ಗದವರಿಗೆ ಕನ್ನಡದಲ್ಲಿ ತರಬೇತಿ ಕಾರ್ಯಕ್ರಮ, ಕನ್ನಡ ಬೆರಳಚ್ಚುಗಾರರಿಗೆ-ಶೀಘ್ರಲಿಪಿಗಾರರಿಗೆ ತರಗತಿಗಳು, ವಿಶೇಷ ಭತ್ಯೆ, ಕನ್ನಡ ಹೆಚ್ಚು-ಹೆಚ್ಚಾಗಿ ಬಳಸುವ ಅಧಿಕಾರಿಗಳಿಗೆ ವಿಶೇಷ ಬಹುಮಾನ ಯೋಜನೆ, ಹಂತಹಂತವಾಗಿ ಇಂಗ್ಲಿಶ್ ಬೆರಳಚ್ಚು ಯಂತ್ರಗಳನ್ನು ಹಿಂತೆಗೆದು ಕೊಂಡು ಕನ್ನಡ ಬೆರಳಚ್ಚು ಯಂತ್ರಗಳನ್ನು ಒದಗಿಸುವುದು ಇತ್ಯಾದಿ ಕಾರ್ಯಕ್ರಮಗಳನ್ನೂ ಕೈಗೊಳ್ಳಲಾಯಿತು. ಮಧ್ಯೆ-ಮಧ್ಯೆ ಮೊಂಡಾಟ ಮಾಡುವ ನೌಕರರಿಗೆ ಅಧಿಕಾರಿಗಳಿಗೆ ಎಚ್ಚರಿಕೆಗಳು ಬೇರೆ. ಇದು ಕಾಣಿಸಿಕೊಂಡಿದ್ದು ಮಾತ್ರ ಇತ್ತೀಚಿನ ವರ್ಷಗಳಲ್ಲಿ. ಬಹುಶಃ ಕನ್ನಡ ಚಳುವಳಿಗಾರರ ಒತ್ತಡ ಇಂತಹ ಎಚ್ಚರಿಕೆ ನೀಡುವಲ್ಲಿ ಪ್ರಭಾವ ಬೀರಿರಬೇಕು. ೧೯೬೩ರಲ್ಲಿ ಕನ್ನಡ ರಾಜ್ಯಭಾಷೆಯಾಗಿ ಘೋಷಿತವಾಗಿದ್ದರೂ ೧೦-೮-೮೧ರ ಅಧಿಕೃತ ಜ್ಞಾಪನದಲ್ಲಿ ಕಚೇರಿಗಳ ನಾಮಫಲಕಗಳನ್ನು ಕನ್ನಡದಲ್ಲಿ ಬರೆಸಲು ಆದೇಶಿಸ ಲಾಗಿದೆ ಎಂದರೆ ಕನ್ನಡದ ಅನುಷ್ಠಾನ ಎಷ್ಟು ಆಮೆವೇಗದಲ್ಲಿ ನಡೆದಿದೆ ಎಂಬುದು ಅರ್ಥವಾಗುತ್ತದೆ. ಮತ್ತೊಂದು ವಿಚಿತ್ರದ ಸಂಗತಿಯೆಂದರೆ, ಕನ್ನಡದ ಅನುಷ್ಠಾನದ ಬಗ್ಗೆ ಆರಂಭದ ಸರ್ಕಾರಿ ಆದೇಶಗಳು, ಇತ್ಯಾದಿಗಳೆಲ್ಲ ೧೯೭೬ರವರೆಗೆ ಇಂಗ್ಲಿಷಿನಲ್ಲಿಯೇ ಇವೆ!

ಹಂತ-ಹಂತವಾಗಿ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವ ತನ್ನ ನೀತಿಯಂತೆ ಸರ್ಕಾರವು ೧೯೬೬ರಿಂದ ತಾಲೂಕು ಮಟ್ಟದಲ್ಲಿಯೂ, ೧-೧೧-೧೯೭೦ ರಿಂದ ಉಪ-ವಿಭಾಗದ ಮಟ್ಟದಲ್ಲಿಯೂ, ೧೫-೮-೭೨ರಿಂದ ಜಿಲ್ಲಾಮಟ್ಟದಲ್ಲಿಯೂ ಕಚೇರಿಗಳಲ್ಲಿ ಜಾರಿಗೆ ತರಲು ಅಧಿಸೂಚನೆಗಳನ್ನು ಹೊರಡಿಸಿದೆ, ಸಚಿವಾಲಯದಲ್ಲಿಯೂ ಕನ್ನಡ ಬಳಸಲು ಆದೇಶಗಳನ್ನು ನೀಡಿದೆ. ೧೯೮೪ರಲ್ಲಿ ರಾಜ್ಯಸರ್ಕಾರದ ಅಂತರ ಕಚೇರಿ ಪತ್ರವ್ಯವಹಾರವನ್ನು (ಕೆಲವು ತಾಂತ್ರಿಕ ಕಚೇರಿಗಳ ತಾಂತ್ರಿಕ ವಿಷಯಗಳನ್ನುಳಿದು) ಕಡ್ಡಾಯವಾಗಿ ಕನ್ನಡ ಭಾಷೆಯಲ್ಲೇ ವ್ಯವಹರಿಸಲು ಆದೇಶಿಸಿದೆ.

೧೯೮೦ರಲ್ಲಿ ಕರ್ನಾಟಕ ರಾಜ್ಯ ಶಾಸನಸಭೆಗಳಿಗೆ ಒದಗಿಸುವ, ಅದರಲ್ಲಿ ಮಂಡಿಸುವ ಎಲ್ಲ ಮಸೂದೆಗಳು, ವರದಿಗಳು, ಆಯವ್ಯಯ ದಾಖಲೆಗಳು ಇತ್ಯಾದಿ ಕನ್ನಡ ಮತ್ತು ಇಂಗ್ಲಿಶ್ ಎರಡು ಭಾಷೆಯಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ. ೧೯೮೪ರಲ್ಲಿ, ಕನ್ನಡ ಭಾಷೆಯಲ್ಲಿ ಶಾಸನಗಳ ಮತ್ತು ನಿಯಮಾವಳಿಗಳ ರಚನೆಮಾಡಲು ಮತ್ತು ಹಿಂದೆ ರಚಿತವಾಗಿರುವ ಶಾಸನಗಳನ್ನು ಮತ್ತು ನಿಯಮಾವಳಿಗಳನ್ನು ೧೯೮೪ರ ಅಂತ್ಯದೊಳಗೆ ಕನ್ನಡಕ್ಕೆ ಭಾಷಾಂತರಿಸಲು, ೧-೧-೮೫ರಿಂದಾಚೆಗೆ ಶಾಸನಸಭೆಯಲ್ಲಿ ತರಲಿರುವ ತಿದ್ದುಪಡಿಗಳನ್ನು ಕನ್ನಡದಲ್ಲೇ ಮಂಡಿಸಲು ಆದೇಶ ಮಾಡಲಾಗಿದೆ.

೨೮-೮-೧೯೮೬ರಂದು ಒಂದು ಮುಖ್ಯವಾದ ಅಧಿಸೂಚನೆಯನ್ನು ಹೊರಡಿಸಲಾಗಿದೆ. ೧೯೬೭ರ ಸರ್ಕಾರಿ ಆದೇಶದಂತೆ ಇಂಗ್ಲಿಶ್ ಮತ್ತು ಕನ್ನಡ ಭಾಷೆಗಳೆರಡರಲ್ಲೂ ರಾಜ್ಯಪತ್ರ ಪ್ರಕಟಿಸುತ್ತಿದ್ದುದನ್ನು ರದ್ದುಪಡಿಸಿ ಈ ಅಧಿಸೂಚನೆಯು, ಇನ್ನುಮುಂದೆ ೧-೯-೮೬ರಿಂದ "ಕರ್ನಾಟಕ ರಾಜ್ಯಪತ್ರ" ಎಂಬ ಹೆಸರಿನಿಂದ ಕನ್ನಡದಲ್ಲಿ ಮಾತ್ರ ಪ್ರಕಟಿಸತಕ್ಕದೆಂಬುದಾಗಿ ಹಾಗೂ ಅದರಲ್ಲಿಯೇ ಒಂದು ಭಾಗದಲ್ಲಿ ಇಂಗ್ಲಿಷಿನಲ್ಲೇ ಹೊರಡಿಸುವ ಭಾಗಗಳು ಇರಬೇಕೆಂಬುದಾಗಿ ಆದೇಶಿಸುತ್ತದೆ.

ಮತ್ತೊಂದು ಮಹತ್ವದ ನಿರ್ಣಯದಂತೆ, ಗಡಿನಾಡ ಕನ್ನಡಿಗರಿಗೆ, ಪ್ರೈಮರಿ ೧ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿದವರಾಗಿದ್ದರೆ, ಅದರ ವಾಸಸ್ಥಳಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಹೆಸರುಗಳನ್ನು ನೊಂದಾಯಿಸಲು ಅವಕಾಶ ಕೊಡಲಾಗಿದೆ.

ನ್ಯಾಯಾಡಳಿತದಲ್ಲಿ ಕನ್ನಡ ಭಾಷೆಯ ಅನುಷ್ಠಾನ ಮಾಡುವ ಸಲುವಾಗಿ, ೧-೧೧-೭೪ ರಿಂದ ಕನ್ನಡವೇ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಗಳ ಭಾಷೆಯಾಗಿರುತ್ತದೆಂದು, ೧೯೭೬ರಿಂದ ಸೆಷನ್ಸ್ ನ್ಯಾಯಾಲಯಗಳ ಭಾಷೆಯಾಗಿರುತ್ತದೆಂದೂ, ೧೯೭೮ರಿಂದ ಉಚ್ಚನ್ಯಾಯಾಲಯದ ಅಧೀನದಲ್ಲಿರುವ ಎಲ್ಲಾ ಸಿವಿಲ್ ನ್ಯಾಯಾಲಯಗಳಲ್ಲಿ ಕನ್ನಡ ಅಧಿಕೃತ ಭಾಷೆಯಾಗಿರುತ್ತದೆಂದೂ ಅಧಿಸೂಚನೆಗಳನ್ನು ಹೊರಡಿಸಲಾಗಿದೆ. ಆದರೆ ಪುನಃ ಈ ನ್ಯಾಯಾಲಯಲಗಳ ಅಧಿಕೃತ ಭಾಷೆ ಕನ್ನಡ ಎಂದು ಘೋಷಿಸುವ ಅಧಿಸೂಚನೆಗಳನ್ನು

ದಿ೨-೫-೮೦ರಲ್ಲಿ ಹೊರಡಿಸಲಾಗಿದೆ. ಕನ್ನಡದ ಉತ್ತಮ ಕೀರ್ಪಿಗೆ ಬಹುಮಾನ ಕೊಡುವ ಯೋಜನೆಯೂ ಸ್ವಲ್ಪ ಕಾಲ ಜಾರಿಯಲ್ಲಿತ್ತು.

ಮುಖ್ಯವಾಗಿ ಕನ್ನಡವನ್ನು ಆಡಳಿತದಲ್ಲಿ ಅನುಷ್ಠಾನಗೊಳಿಸಲು ಅಗತ್ಯವಾದವಹಿ ಗಳನ್ನು, ಅರ್ಜಿಗಳನ್ನು, ಮೀಟಿಂಗ್‌ನೋಟೀಸ್, ಮಿನಿಟ್ಸ್, ನಡವಳಿಕೆಗಳು, ಜಾಹಿರ್‍ನಾಮೆ ಗಳು, ಪರಿ ಪತ್ರಗಳು ಇತ್ಯಾದಿಗಳನ್ನು ಕನ್ನಡದಲ್ಲಿ ಸಿದ್ಧಪಡಿಸಲು ಕ್ರಮಕೈಗೊಳ್ಳಲಾಗಿದೆ.

ಆಡಳಿತಭಾಷೆಯಾಗಿ ಕನ್ನಡದ ಅನುಷ್ಠಾನವನ್ನು ಪರಿಶೀಲಿಸಲು, ಸಲಹೆ ನೀಡಲು ಕ್ರಮ ವಾಗಿ ಸಮಿತಿಗಳನ್ನು, ಕಾವಲು ಸಮಿತಿಗಳನ್ನು, ಕನ್ನಡ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾ ಗಿದೆ. ಇತ್ತೀಚೆಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರವನ್ನು ಶಾಸನಾತ್ಮಕ ಸಂಸ್ಥೆಯನ್ನಾಗಿ ಮಾಡಿ ಕನ್ನಡದ ಅಭಿವೃದ್ಧಿಯ ಕೆಲಸ, ಕನ್ನಡಿಗರಿಗೆ ಉದ್ಯೋಗಾವಕಾಶ ಮತ್ತು ಶಿಕ್ಷಣದಲ್ಲಿ ಕನ್ನಡದ ಬಳಕೆಯ ವಿಷಯಗಳನ್ನು ಇದಕ್ಕೆ ಒಪ್ಪಿಸಲಾಗಿದೆ.

ಕನ್ನಡದ ಅಭಿವೃದ್ಧಿಯ ಬಗ್ಗೆ ಹೊರಡಿಸಿರುವ ನೂರಾರು ಅಧಿಸೂಚನೆಗಳನ್ನು, ಆದೇಶ ಗಳನ್ನು, ಸುತ್ತೋಲೆಗಳನ್ನು, ಅಧಿಕೃತ ಜ್ಞಾಪನಗಳನ್ನು ನೋಡಿದಾಗ ಕನ್ನಡದ ಬಗ್ಗೆ ಸರ್ಕಾರಕ್ಕೆ ಎಷ್ಟೊಂದು ಕಳಕಳಿ ಇದೆ, ನಮ್ಮ ರಾಜ್ಯದಲ್ಲಿ ಕನ್ನಡದ ಅಭಿವೃದ್ಧಿಯ ಬಗ್ಗೆ ಎಷ್ಟೊಂದು ಪ್ರಗತಿಯಾಗಿದೆ ಎಂದು ಹೆಮ್ಮೆಯಾಗುತ್ತದೆ. ಆದರೆ, ವಸ್ತುಸ್ಥಿತಿ ಅದನ್ನು ಸಮರ್ಥಿಸು ವುದಿಲ್ಲ, ಈ ಸರ್ಕಾರಿ ಪತ್ರಗಳು ಸಂಖ್ಯೆಯಲ್ಲಿ ಎಷ್ಟಿವೆ ಎಂದರೆ ಯಾರಿಗೂ ಅದರ ನೆನಪೇ ಇರುವುದಿಲ್ಲ, ಸರ್ಕಾರಗಳು, ಮುಖ್ಯಮಂತ್ರಿಗಳು ಬದಲಾದಾಗ, ಕನ್ನಡ ಚಳುವಳಿಗಾರರ ಒತ್ತಾಯ ಹೆಚ್ಚಾದಾಗ ಪುನಃ ಪುನಃ ಒಂದೇ ವಿಷಯದ ಮೇಲೆ ಆದೇಶಗಳು, ಅಧಿಸೂಚನೆ ಇತ್ಯಾದಿಗಳು ಹೊರಟಿವೆ. ಕನ್ನಡ ಕಾವಲು ಸಮಿತಿಯ, ಅನಂತರ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ರಚನೆಯಾದ ಮೇಲೆಯೇ ಇವುಗಳ ಅನುಷ್ಠಾನಕ್ಕೆ ಒತ್ತು ಬಂದಿದ್ದು ಎಂದು ಹೇಳಬಹುದು. ಅಲ್ಲಿಯವರೆಗೆ ಆದೇಶಗಳು, ಅಧಿಸೂಚನೆಗಳು, ಸುತ್ತೋಲೆಗಳು ಒಂದು ವಿಧದ 'ರಿಚ್ಯು ಯೆಲ್'ಗಳಾಗಿ ಕನ್ನಡಿಗರ ಕಣ್ಣೊರೆಸುವ ಸಾಧನಗಳಾಗಿದ್ದಾವೆಂದೇ ಹೇಳ ಬಹುದು. ಮಧ್ಯೆ-ಮಧ್ಯೆ ತೊಟ್ಟಿಲು ತೂಗುತ್ತಾ ಮಗುವನ್ನು ಜಿಗುಟುವ ಕೆಲಸವೂ ನಡೆಯು ತ್ತಿತ್ತು. ಇತ್ತ ಕನ್ನಡಿ ಗರನ್ನು ತೃಪ್ತಿ ಪಡಿಸಬೇಕು, ಅತ್ತ ಅಲ್ಪಸಂಖ್ಯಾತರ ಒಲವನ್ನೂ ಕಳೆದು ಕೊಳ್ಳಬಾರದು ಎನ್ನುವ ದೃಷ್ಟಿಯಿಂದ, ಒಂದು ಕಡೆ ಕನ್ನಡ ಎಲ್ಲಾ ಹಂತಗಳಲ್ಲಿ ತಕ್ಷಣವೇ ಜಾರಿಗೆ ಬರತಕ್ಕದ್ದು ಎನ್ನುವ ಅಧಿಸೂಚನೆ ಹೊರಡಿಸುತ್ತಿದ್ದಂತೆ, ಇನ್ನೊಂದು ಕಡೆ ಸರ್ಕಾರಿ ನೌಕರಿಗೆ ಸೇರುವಾಗ ಕನ್ನಡದ ಭಾಷಾ ಜ್ಞಾನದ ಅಗತ್ಯವಿಲ್ಲ, ನೌಕರಿಗೆ ಸೇರುವಾಗ ಎರಡು ವರ್ಷಗಳಲ್ಲಿ ಕನ್ನಡ ಕಲಿತರೆಸಾಕು ಎನ್ನುವ ನಿಯಮವನ್ನು ಕರ್ನಾಟಕ ಸಿವಿಲ್ ಸೇವಾ ನಿಯಮದಲ್ಲಿ ಸೇರಿಸುವುದು ಇದಕ್ಕೆ ಉದಾಹರಣೆಯಾಗಿದೆ. ಒಂದು ಕಾಲಕ್ಕೆ, ಜನರೊಂದಿಗೆ ನೇರಸಂಪರ್ಕಕ್ಕೆ ಬರುವ ಸಿ ಮತ್ತು ಡಿ ವರ್ಗದ ನೌಕರರಿಗೂ ನೌಕರಿಗೆ ಸೇರುವಾಗ ಕನ್ನಡದ ಜ್ಞಾನದ ಅಗತ್ಯವಿಲ್ಲವೆಂದು ಸರ್ಕಾರ ಸೇವಾ ನಿಯಮ ತಿದ್ದುಪಡಿ ಮಾಡಿತ್ತು. ಮುಂದೆ ಇದನ್ನು

ಪುನಃ ತಿದ್ದುಪಡಿ ಮಾಡಿ ಸಿ ವರ್ಗದ ಸರ್ಕಾರಿ ನೌಕರರಿಗೆ ಕನ್ನಡದಲ್ಲಿ ಓದುವ ಬರೆಯುವ ಜ್ಞಾನ ಅವಶ್ಯಕವೆಂದು ತಿಳಿಸಿದೆ. ನೂರಾರು ಅಧಿಸೂಚನೆಗಳಿಗಿಂತ ನೌಕರಿಗೆ ಸೇರುವಾಗ ಕನ್ನಡದ ಓದುವ ಬರೆಯುವ ಜ್ಞಾನವನ್ನು ಸೇವಾ ನಿಯಮದಲ್ಲಿ ಕಡ್ಡಾಯಗೊಳಿಸುವುದು ಹೆಚ್ಚು ಅವಶ್ಯಕ ಹಾಗೂ ಪರಿಣಾಮ ಕಾರಿ. ಕನ್ನಡ ತಿಳಿಯದವರು ಅರ್ಜಿ ಹಾಕುವ ಅವಶ್ಯಕತೆ ಇಲ್ಲ ಎಂದು ಹೇಳುವುದು ನೂರಾರು ಅಧಿಸೂಚನೆ, ಸುತ್ತೋಲೆಗಳಿಗಿಂತ ಮಹತ್ವದ್ದು. ಆದರೆ, ನಾವು ಇದುವರಿಗೆ ಕಂಡಿದ್ದು ಹೆಚ್ಚಾಗಿ 'ಕಾಸ್ಮೆಟಿಕ್ ಟಚ್'ಗಳನ್ನು ಮಾತ್ರ.

ಶಿಕ್ಷಣದಲ್ಲಿ ಕನ್ನಡದ ಅನುಷ್ಠಾನದ ವಿಷಯವೇ ಒಂದು ದೀರ್ಘಕತೆಯಾಗಬಲ್ಲದು. ನಮ್ಮ ರಾಜ್ಯದಲ್ಲಿ ಕನ್ನಡಿಗರೂ ಕನ್ನಡವನ್ನು ಒಂದು ವಿಷಯವನ್ನಾಗಿಯೂ ಕಲಿಯದೇ ಶಿಕ್ಷಣ ಮುಗಿಸುವ ಪರಿಸ್ಥಿತಿಯಿದ್ದಾಗ, ಸಂಸ್ಕೃತದ ವಿರುದ್ಧ ಚಳುವಳಿ ಆರಂಭವಾಗಿ ಗೋಕಾಕವರದಿ ಸಲ್ಲಿಸಲ್ಪಟ್ಟಿತು, ಕನ್ನಡಿಗರು-ಕನ್ನಡೇತರರು ಎಲ್ಲರಿಗೂ ಪ್ರಾಥಮಿಕ ೧ನೇ ತರಗತಿಯ ಹಂತದಿಂದ ಕನ್ನಡ ಕಲಿಕೆ ಕಡ್ಡಾಯ ಮಾಡಿದಾಗ ನ್ಯಾಯಾಲಯ ಅದನ್ನು ತಳ್ಳಿಹಾಕಿ ಅಲ್ಪ ಸಂಖ್ಯಾತರ ಮೂಲಭೂತ ಹಕ್ಕುಗಳನ್ನು ರಕ್ಷಿಸಲು ಕೆಲವೊಂದು ಮಾರ್ಗ ದರ್ಶಿ ಸೂತ್ರಗಳನ್ನು ರೂಪಿಸಿಕೊಟ್ಟಿತು. ಅದರ ಅನುಸಾರ ಸರ್ಕಾರ ಆದೇಶ ಮಾಡಿ ಮಾತೃ ಭಾಷೆಯನ್ನು ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮವಾಗಿ, ಕನ್ನಡೇತರರಿಗೆ ೩ನೇ ತರಗತಿಯಿಂದ ಕನ್ನಡ ಕಲಿಕೆ ಕಡ್ಡಾಯಮಾಡಿತು. ಸರ್ವೋಚ್ಚ ನ್ಯಾಯಾಲಯದ ಸಮ್ಮತಿ ಯನ್ನು ಪಡೆದರೂ ಪುನಃ ಕೆಲವೊಂದು ಬದಲಾವಣೆ ಮಾಡಿ ಆದೇಶ ಹೊರಡಿಸಿದ ಕಾರಣ ದಿಂದಾಗಿ ಆ ಸರ್ಕಾರಿ ಆದೇಶ ಪುನಃ ನ್ಯಾಯಾಲಯದಲ್ಲಿ ಪ್ರಶ್ನಿಸಲ್ಪಟ್ಟಿತು. ಇಂದು ಶಿಕ್ಷಣ ದಲ್ಲಿ ಇರಬೇಕಾದ ಭಾಷಾನೀತಿ ಗೊಂದಲಮಯವಾಗಿದ್ದು, ಸರ್ವೋಚ್ಚನ್ಯಾಯಾಲ ಯದ ಸಂವೈಧಾನಿಕ ನ್ಯಾಯಪೀಠದಿಂದ ಕೊನೆಯ ತೀರ್ಪು ಹೊರಬರುವವರೆಗೆ ಹಾಗೆಯೇ ಉಳಿ ಯುವ ಅಪಾಯವಿದೆ.

೧೯೬೩ರಲ್ಲಿ ಕನ್ನಡವನ್ನು ರಾಜ್ಯದ ಅಧಿಕೃತ ಭಾಷೆಯಾಗಿ ಘೋಷಣೆ ಮಾಡಿದಂದಿನಿಂದ ಇಲ್ಲಿಯವರೆಗಿನ ನಡೆದುಬಂದ ದಾರಿಯ ಸಿಂಹಾವಲೋಕನ ಮಾಡಿದಾಗ, ನಮ್ಮ ನೆರೆ ಹೊರೆಯ ರಾಜ್ಯಗಳೊಂದಿಗೆ ಹೋಲಿಸಿ ನೋಡಿದಾಗ, ಕನ್ನಡದ ಅಭಿವೃದ್ಧಿಯ ಬಗ್ಗೆ ಪೂರ್ಣತೃಪ್ತಿಯಾಗುವುದಿಲ್ಲ. ಆಡಳಿತದ ಕೆಳಹಂತದಲ್ಲಿ ಸ್ವಲ್ಪ ಮಟ್ಟಿನ ಪ್ರಗತಿಯಾಗಿದ್ದರೂ ಸಚಿವಾಲಯದ ಮಟ್ಟದಲ್ಲಿ ಪೂರ್ಣಪ್ರಮಾಣದಲ್ಲಿ ಆಗಿಲ್ಲ. ಕೆಳನ್ಯಾಯಾಲಯಗಳಲ್ಲೂ ಕನ್ನಡದ ಅನುಷ್ಠಾನದ ಮಟ್ಟ ತೃಪ್ತಿಕರವಾಗಿಲ್ಲ. ಒಂದೇ ಸಮನೆ ನಡೆದ ಚಳುವಳಿಗಳ ಫಲವಾಗಿ ಶಾಲೆಗಳಲ್ಲಿ ಕನ್ನಡವನ್ನು ಒಂದು ವಿಷಯವಾಗಿ ಕಲಿಸುವುದು ಆರಂಭವಾಗಿದ್ದರೂ ಮಾತೃಭಾಷಾ ಮಾಧ್ಯಮದ ಪ್ರಾಥಮಿಕ ಶಾಲೆಗಳು ಇನ್ನೂ ಸಾಕಾರಗೊಂಡಿಲ್ಲ. ಆಂಗ್ಲ ವ್ಯಾಮೋಹ ಬಿಟ್ಟು ಹೋಗಿಲ್ಲ.

ಇತ್ತೀಚಿನ ಮಾಹಿತಿ ಕ್ಷೇತ್ರದಲ್ಲಿನ ವೈಜ್ಞಾನಿಕ-ತಾಂತ್ರಿಕ ಪ್ರಗತಿಗಳು ಕನ್ನಡದ ಅನುಷ್ಠಾ

ನಕ್ಕೆ ಸವಾಲಾಗಿ ಪರಿಣಮಿಸಿವೆ. ಕಂಪ್ಯೂಟರ್‌ನ ಹೆಚ್ಚು-ಹೆಚ್ಚಾದ ಬಳಕೆ ಇಂಗ್ಲಿಶ್‌ನತ್ತ ಕನ್ನಡಿಗರನ್ನು ಮತ್ತಷ್ಟು ಆಕರ್ಷಿಸುತ್ತಿದೆ. ಕಂಪ್ಯೂಟರ್ ತಂತ್ರಜ್ಞಾನದಲ್ಲಿ ಕನ್ನಡವನ್ನು ಅಳವಡಿಸದಿದ್ದಲ್ಲಿ ಭಾಷೆಗೆ ಭವಿಷ್ಯವೇ ಇಲ್ಲದಸ್ಥಿತಿ. ಕನ್ನಡ ಭಾಷೆಯನ್ನು ಸುಸ್ಥಿತಿಯಲ್ಲಿ ಉಳಿಸಿಕೊಂಡು ಒಳ್ಳೆಯ ಇಂಗ್ಲಿಷಿನ ಜ್ಞಾನವನ್ನೂ ಹೊಂದುವ ಬಗ್ಗೆ ಇಂದು ಗಂಭೀರವಾಗಿ ವಿಚಾರ ಮಾಡಬೇಕಾಗಿದೆ. ಇವೆರಡರ ಸಮತೋಲನ ಸಾಧಿಸುವುದರಲ್ಲಿ ನಮ್ಮ ಯಶಸ್ಸು ಅಡಗಿದ್ದು, ಅದಕ್ಕೆ ತಕ್ಕ ಭಾಷಾನೀತಿಯನ್ನು ರೂಪಿಸಿಕೊಳ್ಳಬೇಕಾಗಿದೆ. (ಈ ಲೇಖನ ಸಿದ್ಧಪಡಿಸುವಲ್ಲಿ ಶ್ರೀ ಮಹದೇವ ಬಣಕಾರರ "ಆಂಗ್ಲರ ಆಡಳಿತದಲ್ಲಿ ಕನ್ನಡ"ಪುಸ್ತಕದ ಕೆಲವೊಂದು ಭಾಗಗಳನ್ನು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಪ್ರಕಟಿಸಿದ "ಆಡಳಿತ ಕನ್ನಡ ಅನುಷ್ಠಾನ ಆದೇಶಗಳ ಸಂಕಲನ"ವನ್ನುಬಳಸಿಕೊಳ್ಳಲಾಗಿದೆ. ಅವರಿಗೆ ಕೃತಜ್ಞತೆಗಳು.)

# ಕರ್ನಾಟಕದಲ್ಲಿ ಭಾಷಾಯೋಜನೆ

ಡಾ. ಕೃ. ಅನ್ಸನ್

ಬಯಸಿದ ಫಲವನ್ನು ಪಡೆಯಲು ಪ್ರಜ್ಞಾಪೂರ್ವಕವಾಗಿ ಕ್ರಮಬದ್ಧವಾಗಿ ಮಾಡುವ ಪ್ರಕ್ರಿಯೆಯನ್ನೇ "ಯೋಜನೆ" ಎನ್ನುತ್ತೇವೆ. ಹೇಗೋ ಮಾಡುವುದು ಒಂದು, ಹೀಗೇ ಮಾಡುವುದು ಮತ್ತೊಂದು. ಈ ಕಾರಣದಿಂದ ಹೀಗೇ ಮಾಡುವುದು "ಯೋಜನೆ". ಆರ್ಥಿಕ ಯೋಜನೆ ಯಂತೆ ಭಾಷಾಯೋಜನೆ ಕೂಡ ಈ ಪ್ರಕಾರವೇ ಬೆಳೆದು ಬಂದಿದೆ. ಒಂದು ಭಾಷೆಯನ್ನೋ ಹೆಚ್ಚಿನ ಭಾಷೆಗಳನ್ನೋ ಜನರ ಸರ್ವಾಂಗೀಣ ಅಭಿವೃದ್ಧಿಗೆ ನೆರವಾಗುವಂತೆ ಸಮರ್ಥರೀತಿಯಲ್ಲಿ ಬಳಸುವುದನ್ನೇ ಭಾಷಾಯೋಜನೆ ಎನ್ನುತ್ತೇವೆ. ಇದು ಭಾಷಾನೀತಿ ನಿರೂಪಣೆ, ವಿವರವಾದ ಯೋಜನಾತಯಾರಿಕೆ, ಆಚರಣೆ ಅಥವಾ ಅನುಷ್ಠಾನ, ಮೌಲ್ಯ ಮಾಪನ, ನೀತಿಯ ಪುನರ್ರಚನೆ ಎಂದು ಹಲವು ಹಂತಗಳನ್ನು ಒಳಗೊಂಡಿರುತ್ತದೆ. ಈ ಪ್ರಕ್ರಿಯೆ ಸತತವಾದದ್ದು, ಕೊನೆಯಿಲ್ಲದ್ದು. ಭಾಷಾಯೋಜನೆ ಎಂಬುದು, ಆಡಳಿತ, ಶಿಕ್ಷಣ, ಸಂಸತ್ ವ್ಯವಹಾರ, ಕಾನೂನು, ವಾಣಿಜ್ಯ ಇತ್ಯಾದಿ ಸಾಮೂಹಿಕ ರಂಗಗಳಲ್ಲಿ ಹಾಗೂ ವೈಯಕ್ತಿಕ ಪತ್ರವ್ಯವಹಾರ, ಮಕ್ಕಳ ನಾಮಕರಣ, ಮನೆ, ಸಾಕುಪ್ರಾಣಿಗಳ ನಾಮಕರಣ, ವೈಯಕ್ತಿಕ ಪ್ರಾರ್ಥನೆ ಇತ್ಯಾದಿ ವೈಯಕ್ತಿಕ ರಂಗಗಳಲ್ಲಿಯೂ ನಡೆಯುವ ಪ್ರಕ್ರಿಯೆಯಾಗಿದೆ. ಇದು, ಆಯ್ಕೆ ಚೌಕಟ್ಟು ನೀಡುವುದು, ಪ್ರಮಾಣೀಕರಣ, ಆಧುನೀಕರಣ, ಅಭಿವೃದ್ಧಿ, ಲಿಪಿ ನಿರ್ಮಾಣ ಹಾಗೂ ಸುಧಾರಣೆ ಎಂದು ಹಲವು ಅಂಶಗಳನ್ನೊಳಗೊಂಡ ಒಂದು ಪ್ರಕ್ರಿಯೆಯಾಗಿದೆ. ಈ ಹಿನ್ನೆಲೆಯಲ್ಲಿ, ಕರ್ನಾಟಕದಲ್ಲಿ ಪರಿಸ್ಥಿತಿ ಹೇಗಿದೆ ಎಂಬುದನ್ನು ಸ್ಥೂಲವಾಗಿ ಇಲ್ಲಿ ಗಮನಿಸುವ ಪ್ರಯತ್ನವನ್ನು ಮಾಡಲಾಗಿದೆ.

### ರಾಜ್ಯ ಸರಕಾರ

ಕರ್ನಾಟಕದಲ್ಲಿ ಸಮಗ್ರ ಭಾಷಾನೀತಿಯನ್ನು ಒಮ್ಮೆಲೇ ಪ್ರಕಟಿಸದಿದ್ದರೂ ೧೯೬೩ರ ಕರ್ನಾಟಕ ರಾಜಭಾಷಾ ಅಧಿನಿಯಮದ ಮೂಲಕ ಹಲವು ರಂಗಗಳಲ್ಲಿ ತನ್ನ ನೀತಿಯನ್ನು ನಿರ್ಧರಿಸಿತ್ತೆಂದೇ ಹೇಳಬೇಕು. ಹಲವು ಸುತ್ತೋಲೆಗಳ ಮೂಲಕ ಹಾಗೂ ಪ್ರಕಟನೆಗಳ ಮೂಲಕವೂ ತನ್ನ ನಿಲುವನ್ನು ತಿಳಿಸುತ್ತಾ ಬಂದಿದೆ. ಗೋಕಾಕ ವರದಿಯ ಒಪ್ಪಿಗೆಯ ಮೂಲಕ ಹಾಗೂ ಹಲವು ಮಾಧ್ಯಮಗಳ ಶಾಲೆಗಳಿಗೆ ಮನ್ನಣೆ ನೀಡುವುದರ ಮೂಲಕ ಶಿಕ್ಷಣ ರಂಗದಲ್ಲಿ ಭಾಷಾನೀತಿಯನ್ನು ಅನುಸರಿಸುತ್ತಾ ಬಂದಿದೆ. ಕನ್ನಡಕ್ಕೆ ಅಗ್ರಸ್ಥಾನ,

ಇಂಗ್ಲಿಷಿನ ಮುಂದುವರಿಕೆ, ತಮಿಳು, ತೆಲಗು, ಮರಾಠಿ, ಉರ್ದು, ಹಿಂದಿ, ಅರಾಬಿಕ್ ಭಾಷೆಗಳಿಗೂ ತಕ್ಕ ಮನ್ನಣೆ ಇತ್ಯಾದಿ ರೀತಿಯಲ್ಲಿ ಸಾಗುತ್ತಾ ಬಂದಿದೆ. ಸಮೂಹ ಮಾಧ್ಯಮವಾದ ಚಲನಚಿತ್ರಗಳ ಪ್ರದ ರ್ಶನ ಸಹಾಯವೆಂದು ತೆರಿಗೆರಿಯಾಯಿತಿ ನೀಡುವ ವಿಧಾನಗಳಿಂದ ತನ್ನ ಕನ್ನಡ ಪರ ಧೋರಣೆಯನ್ನು ತಾಳುತ್ತಾ ಬಂದಿದೆ. ಸಾಮಾನ್ಯವಾಗಿ ಸರಕಾರದ ನೀತಿ ಸರಿಯಾಗಿದೆ ಎಂದೇ ಹೇಳಬಹುದು. ಕನ್ನಡ ಚಿತ್ರಗಳ ಪ್ರದರ್ಶನವನ್ನು ಕಡ್ಡಾಯ ಮಾಡುವುದು ವ್ಯಾವಹಾರಿಕ ರೀತಿಯಿಂದ ಸರಿಯೆಂದೆನಿಸದು. ಬೇಕೆಂದೇ ಪರಭಾಷಿಕ ಚಿತ್ರಗಳನ್ನು ತೋರಿಸುತ್ತಾರೆಂಬ ವಾದವಿದೆ. ನೋಡುವವರಿದ್ದರೆ ಕನ್ನಡ ಚಿತ್ರಗಳನ್ನು ತೋರಿಸಿಯೇ ತೋರಿಸುತ್ತಾರೆ. ಜನರ ಅಭಿರುಚಿ, ಚಿತ್ರಗಳ ಗುಣಮಟ್ಟ, ವೈವಿಧ್ಯತೆ ಮುಂತಾದ ವಿಷಯಗಳೂ ಇದರೊಳಗೆ ಇವೆ. ಶಿಕ್ಷಣದಲ್ಲಿ ಕನ್ನಡಕ್ಕೆ ೧೨೫ ಅಂಕಗಳು ನೀಡಿ ಉಳಿದ ಭಾಷೆಗಳಿಗೆ ೧೦೦ ಅಂಕಗಳನ್ನು ನೀಡುವ ನೀತಿಯಿಂದ ಕನ್ನಡೇತರ ಭಾಷಿಕರಿಗೆ ಬೇಸರ ಉಂಟಾಗಿದೆ. ೧೦೦ ಗುಣಗಳೇ ಇರುವುದು ಸೂಕ್ತ.

ವಿವರವಾದ ಯೋಜನೆ ತಯಾರಿಸುವುದು ಸಾಧಾರಣವಾಗಿ ಇಲ್ಲವೆಂದೇ ಹೇಳಬೇಕು. ಆದರೂ ಕೂಡ ಆಡಳಿತ ರಂಗದಲ್ಲಿ ಕನ್ನಡ ಬಳಕೆಯ ಬಗ್ಗೆ ಹೆಚ್ಚು ಯೋಜಿಸಲಾಗಿದೆ ಎನ್ನಬಹುದು. ಹಲವು ಕಮ್ಮಟ-ಕಾರ್ಯಾಗಾರಗಳು, ಕೈಪಿಡಿ, ಪದಕೋಶಗಳ ಪ್ರಕಟನೆ ಇತ್ಯಾದಿ ಸರಕಾರದ ಪ್ರಯತ್ನವನ್ನು ಸಾರಿ ಹೇಳುತ್ತವೆ. ಆಡಳಿತ ಕನ್ನಡ ಅನುಷ್ಠಾನ-ಆದೇಶಗಳ ಸಂಕಲನ (೧೯೬೩-೧೯೯೩ ಜುಲೈ ಅಂತ್ಯದವರೆಗೆ) ಎಂಬ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರಕಟನೆ ಇದಕ್ಕೆ ಸಾಕ್ಷಿಯಾಗಿದೆ. ಈ ಬೃಹತ್ ಪ್ರಕಟನೆ ಇನ್ನೂ ನೀತಿಯನ್ನು ಸರಿಯಾಗಿ ಪಾಲಿಸಲಿಲ್ಲ ಎಂಬ ಕಹಿ ಸತ್ಯವನ್ನು ತೋರಿಸುತ್ತದೆ. ಅನುಷ್ಠಾನದ ವೈಫಲ್ಯಕ್ಕೆ ಹಿಡಿದ ಕೈಗನ್ನಡಿ ಯಾಗಿದೆ.

ಆಚರಣೆಯಲ್ಲಿ ಬಯಸಿದಷ್ಟು ಪರಿಣಾಮ ಆಗಿಲ್ಲವೆಂದೇ ಹೇಳಬೇಕು. ಐ.ಎ.ಎಸ್. ಅಧಿಕಾರಿಗಳು ಭಾಷಾ ಅಲ್ಪಸಂಖ್ಯಾತರು ಅಡ್ಡ ಬರುತ್ತಾರೆಂಬ ಕೂಗಿನಲ್ಲಿ ಸ್ವಲ್ಪ ಸತ್ಯವಿದ್ದರೂ ಕಾರ್ಯಗತ ಮಾಡುವವರಲ್ಲಿ ಬಹುಜನರು ಕನ್ನಡಿಗರಿದ್ದರೂ ಕನ್ನಡ ಸರಿಯಾಗಿ ಬಳಕೆಯಾಗದಿರುವುದಕ್ಕೆ ಕನ್ನಡಿಗರ ನಿರ್ಲಕ್ಷ್ಯ, ಪೂರಕಸಾಮಗ್ರಿಗಳ ಕೊರತೆ (ಕೆಲವು ಪದಕೋಶಗಳು ಕೈಪಿಡಿಗಳನ್ನು ಹೊರತು ಪಡಿಸಿ) ಇದ್ದದ್ದನ್ನೇ ಮುಂದುವರೆಸುವ ಸರಳ ಸ್ವಭಾವಗಳೇ ಪ್ರಾಮುಖ್ಯವಾದ ಕಾರಣಗಳು. ಪರಭಾಷಿಕರ ಮೇಲೆ ಗೂಬೆ ಕೂರಿಸುವ ಕೆಲಸದಲ್ಲಿ ತೊಡಗುವ ಬದಲು ತಾವು ಮೊದಲು ಎಲ್ಲಾ ರಂಗಗಳಲ್ಲಿಯು ಕನ್ನಡವನ್ನು ಬಳಸಿ ತೋರಿಸುವ ಪ್ರಯತ್ನವನ್ನು ಸರಿಯಾಗಿ ಮಾಡಿಲ್ಲ ಎಂಬುದೇ ನನ್ನ ಅನುಭವ. ತಮಿಳು ನಾಡು ಕೇರಳ ರಾಜ್ಯಗಳಲ್ಲಿರುವಷ್ಟು ಸ್ವಾಭಿಮಾನ ಸ್ವಪ್ರಯತ್ನಗಳು ಕಂಡು ಬರುವುದಿಲ್ಲ. ಕನ್ನಡ ಸಮಾಜದಲ್ಲಿ ಪರಿವರ್ತನೆ ಮೊದಲು ಆಗಬೇಕು. ಹಲವು ಅಕಾಡೆಮಿಗಳನ್ನೂ, ಪ್ರಾಧಿಕಾರವನ್ನೂ, ಕನ್ನಡ ವಿಶ್ವವಿದ್ಯಾಲಯವನ್ನೂ, ಸ್ಥಾಪಿಸಿದೆಯಾದರೂ ಸರಿಯಾದ ಕಾರ್ಯವಿಂಗಡನೆಯ ಕೊರತೆ, ಆಡಳಿತಾತ್ಮಕ ಹಾಗೂ ಆರ್ಥಿಕ ತೊಂದರೆಗಳಿಂದ ನಿರೀಕ್ಷಿತ ಲಾಭ

ಸಿಗಲಿಲ್ಲ. ಈ ಸಂಸ್ಥೆಗಳ ಕೆಲವು ಪ್ರಕಟನೆಗಳು ಕಾರ್ಯ ಕಲಾಪಗಳು ಸರಕಾರದ ನೀತಿಯ ಸಾಫಲ್ಯಕ್ಕೆನೆರವಾಗಿವೆ ಎಂಬುದನ್ನೂ ಮರೆಯಲಿಕ್ಕಾಗದು. ಸಂಸ್ಥೆಗಳು ಹೆಚ್ಚಾಗುವುದಕ್ಕಿಂತ ಚಟುವಟಿಕೆಗಳು ಹೆಚ್ಚಾಗಬೇಕು. ನಿರ್ದಿಷ್ಟ ಗುರಿಯತ್ತ ಸಾಗಬೇಕು. ಪ್ರಾಧಿಕಾರದ ಕನ್ನಡ ನಾಮಫಲಕ ಆಂದೋಲನ, ಬೆರಳಚ್ಚು ಯಂತ್ರಗಳ ಆಂದೋಲನಗಳು, ಪರಭಾಷಾ ವಿರೋಧಿ ಎಂದು ಭಾಸವಾಗುವ ರೀತಿಯಲ್ಲಿರುವುದರಿಂದಲೇ ಸರಿಯಾಗಿ ಫಲನೀಡಿಲ್ಲ ಎನ್ನಬೇಕು. ಕನ್ನಡ ನಾಮಫಲಕ ಸಂಬಂಧ ತೆರಿಗೆ ರಿಯಾಯಿತಿ ಅಥವಾ ಫಲಕ ಬರೆಯುವ ಸಾಂಘಿಕ ವ್ಯವಸ್ಥೆ ಇಂಗ್ಲಿಶ್ ಬೆರ ಳಚ್ಚು ಯಂತ್ರವನ್ನು ತೆಗೆಯದೆಯೆ ಕನ್ನಡ ಬೆರಳಚ್ಚು ಯಂತ್ರವನ್ನು ಕೊಡುವುದು ಮುಂತಾಗಿ ಸರಳವಾಗಿ ಮಾಡಬಹುದು. ಕಂಪ್ಯೂಟರ್ ಯುಗದಲ್ಲಿ ಬಹು ಭಾಷಾಬಳಕೆಯ ಸೌಲಭ್ಯವನ್ನು ಸುಲಭವಾಗಿ ಕಲ್ಪಿಸಿಕೊಡ ಬಹುದಾಗಿದೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮೌಲ್ಯಮಾಪನ ಮಾಡುತ್ತಿದೆ. ಇದು ಇನ್ನೂ ವ್ಯಾಪಕ ವಾಗಬೇಕು. ಪರಿಹಾರ, ಸಲಹೆ ಸೂಚನೆ ನೀಡುವ ರೀತಿಯಲ್ಲಾಗಬೇಕು. ದಂಡಿಸಲೇ ಹೊರ ಟಂತಿರಬಾರದು.

ನೀತಿಯಲ್ಲಿ ಏನು ಪುನರ್ರಚನೆ ಗಣನೀಯವಾಗಿ ಆಗಿಲ್ಲ. ಸಣ್ಣ ಪುಟ್ಟ ಬದಲಾವಣೆಗಳು ಆಗಿವೆ. ಎಲ್ಲ ರಂಗಗಳಲ್ಲಿಯೂ ನಡೆಯುತ್ತಿದೆ ಎಂಬುದರ ಸರಿಯಾದ ಅಧ್ಯಯನ ನಡೆಯದ ಹೊರತು ಪುನರ್ರಚನೆ ಸರಿಯಾಗಿ ಆಗುವುದಿಲ್ಲ. ಜಾಗತೀಕರಣ ನಡೆಯುವ ಈ ಸಂದರ್ಭದಲ್ಲಿ ಕನ್ನಡದ ಅಂಕೆಸಂಖ್ಯೆಗಳನ್ನು ಬಳಸಬೇಕೆಂಬುದು ಇಂಗ್ಲಿಶನ್ನು ನಿರ್ಲಕ್ಷ್ಯ ಮಾಡುವುದು ಸರಿಯಲ್ಲ. ಕನ್ನಡಕ್ಕೆ ಕುಂದು ತರದೇನೆ ಇಂಗ್ಲಿಶ್ ಇತ್ಯಾದಿ ಭಾಷೆಗಳನ್ನು ಚೆನ್ನಾಗಿ ಕಲಿಸ ಬಹುದಾಗಿದೆ.

ರಂಗಗಳಲ್ಲಿ ಎದ್ದುಕಾಣುವುದು ಆಡಳಿತ ಹಾಗೂ ಶಿಕ್ಷಣ. ಇಲ್ಲಿ ತಕ್ಕ ಮಟ್ಟಿಗೆ ಸುಧಾರಣೆ ಆಗುತ್ತಿದೆ. ಕಾನೂನು ವಿಭಾಗದಲ್ಲಿ ಸರಳ ಭಾಷೆಯನ್ನು ಬಳಸುವ ಪರಿಪಾಠ ಬೆಳೆಯಬೇಕು. ಭಾಷಾಂತರ ಮನೋಭಾವ ತೊಲಗಿ ನಮ್ಮ ಭಾಷೆಯಲ್ಲೇ ರಚಿಸುವ ಗುರಿಯಿರಬೇಕು. ಧಾರ್ಮಿಕ ರಂಗದಲ್ಲಿ ತಮಿಳರ, ಕೊಂಕಣಿಗರ ವಿರುದ್ಧ ಕೂಗು ಕೇಳಿಬರು ತ್ತದೆ. ಇಲ್ಲಿ ಕನ್ನಡೇ ತರರ ಸಂಖ್ಯಾಬಲವನ್ನೂ ಗಮನಿಸಬೇಕು. ಶಾಂತಿ ಸೌಹಾರ್ದತೆಯನ್ನು ಉಳಿಸಿಕೊಂಡೇ ಕನ್ನಡಕ್ಕೂ ಸ್ಥಾನಮಾನ ದೊರಕಿಸಿ ಕೊಡಬೇಕು. ಕರ್ನಾಟಕ ಎಂದ ಮಾತ್ರಕ್ಕೆ ಪೂಜೆ ಪುರಸ್ಕಾರಗಳೆಲ್ಲಾ ಕನ್ನಡದಲ್ಲಿಯೇ ಆಗಬೇಕೆಂಬುದೂ ಪೂರ್ಣ ಒಪ್ಪಲಿಕ್ಕಾಗದು. ಎಲ್ಲಾ ಭಾಷಿಕರಿಗೂ ಅವಕಾಶ ಸಿಗಲು ನೆರವಾಗಬೇಕು ವೈಯಕ್ತಿಕವಾದ ಮನೆ, ಮಕ್ಕಳು, ಸಾಕು ಪ್ರಾಣಿಗಳ ಹೆಸರಿಡುವುದು ಪತ್ರವ್ಯವಹಾರ ಇತ್ಯಾದಿಗಳಲ್ಲಿ ನೆರವಾಗಿ ನಾವೇನೂ ಮಾಡಲಿಕ್ಕಾಗದು. ಇಂಗ್ಲಿಶ್, ಸಂಸ್ಕೃತ ವ್ಯಾಮೋಹ ಎದ್ದು ಕಾಣುವ ರಂಗ ಇದು. ಕನ್ನಡಾಭಿ ಮಾನ ಪ್ರಜ್ಞೆ ಮೂಡಿಸುವವರ ಮೂಲಕವೇ ಈ ಸ್ಥಿತಿಯನ್ನು ಬದಲಿಸಬೇಕು.

ಭಾಷಾಯೋಜನೆಯ ವಿಭಿನ್ನ ಅಂಶಗಳನ್ನು ತೆಗೆದುಕೊಂಡರೆ ಅವುಗಳ ಬಗ್ಗೆ ಅಪಸ್ವರ

ಎಬ್ಬಿಸಲಿಕ್ಕಾಗದು. ಭಾಷಾವಾರು ಪ್ರಾಂತ ಎಂದ ಮೇಲೆ ಕನ್ನಡ ಆಡಳಿತ ಭಾಷೆಯೆಂದಾಗ ವಿರೋಧಿಸುವುದು ಸರಿಯಲ್ಲ. ಬೆಳಗಾವಿ, ಕೋಲಾರ ಮುಂತಾದ ಕನ್ನಡೇತರ ಭಾಷಿಕರು ಹೆಚ್ಚಾಗಿರುವ ಸ್ಥಳಗಳಲ್ಲಿ ಆ ಭಾಷೆಗಳನ್ನೂ ಬಳಸಿಕೊಂಡೇ ಕನ್ನಡವನ್ನೂ ಬಳಸುವುದು ಸೂಕ್ತ. ಒಮ್ಮೊಮ್ಮೆ ಕನ್ನಡದಲ್ಲಿ ಮಾತ್ರ ಎಂದು ಕೆಲವರು ಕಾವಲು ಸಮಿತಿಯವರು ಹೇಳಿದ್ದುಂಟು. ಹೀಗಾಗಿಯೇ ಕನ್ನಡ ವಿರೋಧಿ ಪ್ರವೃತ್ತಿ ಬೆಳೆಯುತ್ತದೆ. ಕರ್ನಾಟಕ ಸರಕಾರ ಎಲ್ಲ ಪ್ರಜೆಗಳದ್ದು. ಎಲ್ಲರ ಭಾಷೆಗೂ ಮನ್ನಣೆ ಇದೆ. ಆಡಳಿತ ಸುಲಲಿತವಾಗಿ ಕಡಿಮೆ ಖರ್ಚಿನಲ್ಲಿ ನಡೆಯಲು ಕನ್ನಡಕ್ಕೆ ಆದ್ಯತೆ ಎಂಬವಾದವನ್ನು ಸರಿಯಾಗಿ ಮಂಡಿಸಿ ಪರಭಾಷಿಕರನ್ನೂ ಒಲಿಸಿಕೊಳ್ಳಬೇಕು. ಕನ್ನಡ ಹಲವಾರು ವರ್ಷಗಳಿಂದ ಬೇರೆ ಬೇರೆ ರಂಗಗಳಲ್ಲಿ ಬಳಕೆ ಯಾಗುತ್ತಾ ಬಂದಿರುವುದರಿಂದ ಚೌಕಟ್ಟು ನೀಡುವ ಪ್ರಶ್ನೆ ಏಳುವುದಿಲ್ಲ. ಸ್ವಲ್ಪಮಟ್ಟಿಗೆ ಪ್ರಮಾಣೀಕರಣ ಬೇಕಾಗಿದೆ. ಕರ್ನಾಟಕ ಬೇರೆ ಬೇರೆ ಪ್ರಾಂತಗಳಿಂದ ಬಂದು ಏಕೀಕರಣ ಹೊಂದಿರುವುದರಿಂದ ವಿಭಿನ್ನ ಸಂಪ್ರದಾಯಗಳಿವೆ. ನಿಧಾನವಾಗಿ ಯಾರಿಗೂ ಮನಸ್ಸು ನೋವಾಗದೇ ಪ್ರಮಾಣೀಕರಣವಾಗಬೇಕು. ಸದ್ಯಕ್ಕೆ ಪರ್ಯಾಯ ಶಬ್ದಗಳಾಗಿ ಬಳಸಬಹುದು. ಈ ಕಾಲದ ಅವಶ್ಯಕತೆಗೆ ಅನುಗುಣವಾಗಿ ಕನ್ನಡವನ್ನು ಬೆಳಸಬೇಕು. ಈ ನಿಟ್ಟಿನಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ, ನವಕರ್ನಾಟಕ ಪ್ರಕಟನಾಲಯ, ಐ.ಬಿ.ಎಚ್. ಸಂಸ್ಥೆ, ಕೃಷಿ ವಿಶ್ವವಿದ್ಯಾಲಯಗಳು ಉಳಿದ ಸಾಮಾನ್ಯ ವಿಶ್ವವಿದ್ಯಾಲಯಗಳು, ಕನ್ನಡ ವಿಶ್ವವಿದ್ಯಾಲಯ ಮುಂತಾದ ಸಂಸ್ಥೆಗಳು ಗಣನೀಯ ಸೇವೆ ಮಾಡುತ್ತಿವೆ. ಹೊಸದಾಗಿ ಬಂದಿರುವ ತಾಂತ್ರಿಕ ಶಿಕ್ಷಣ ವಿಶ್ವ ವಿದ್ಯಾಲಯ, ವೈದ್ಯಕೀಯ ಶಿಕ್ಷಣ ವಿಶ್ವವಿದ್ಯಾಲಯ ಗಳೂ ತಮ್ಮ ಸೇವೆಯನ್ನು ಮಾಡಬೇಕು. ಇನ್ನು ಲಿಪಿ ನಿರ್ಮಾಣದ ಪ್ರಶ್ನೆ ಕನ್ನಡದ ಮಟ್ಟಿಗೆ ಇಲ್ಲ. ಸುಧಾರಣೆಗೆ ಮಾತ್ರ ಅವಕಾಶ ಇದೆ. ಈಗಾಗಲೇ ಡಾ.ಆರ್.ಸಿ. ಹಿರೇಮಠ, ಡಾ. ಹೈನ್‌ರಿಚ್, ಡಾ.ಸಿ.ಉಮಾಕಾಂತ ಮುಂತಾ ದವರು ಕನ್ನಡ ಲಿಪಿಯ ಸುಧಾರಣೆಯ ಬಗೆಗೆ ಸಂಶೋಧನೆ ಮಾಡಿದ್ದಾರೆ. ಇಲ್ಲಿ ಮುಖ್ಯವಾಗಿ ನೋಡಬೇಕಾದದ್ದು ಅಕ್ಷರಗಳು ವಿಭಿನ್ನ ವಾಗಿರಬೇಕು, ಅನನ್ಯವಾಗಿ ಎದ್ದು ಕಾಣುವಂತಿರಬೇಕು, ಸರಳವಾಗಿರಬೇಕು, ವಿರೋಧಾಭಾಸ ಇರಕೂಡದು, ನಾನಾರೀತಿಯ ಬಳಕೆಗೆ ಅನುಕೂಲವಾಗಿರ ಬೇಕು. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಲಿಪಿಯನ್ನು ತಮಿಳರು, ಮಲಯಾಳಿಗಳೂ, ಧೈರ್ಯಮಾಡಿದಂತೆ ಮಾಡಿದರೆ ಕೋಟ್ಯಾನುಕೋಟಿ ಕನ್ನಡಿಗರಿಗೆ ಅನುಕೂಲವಾಗುತ್ತದೆ. ಕರ್ನಾಟಕದಲ್ಲಿ ಕೊಡವ, ತುಳು, ಕೊಂಕಣಿ, ಉರ್ದು ಭಾಷೆಗಳ ಬೆಳವಣಿಗೆಗೂ ನೆರವು ನೀಡಲಾಗಿದೆ. ಇದರಲ್ಲೇನೂ ತಪ್ಪಿಲ್ಲ. ತಮಿಳು, ತೆಲುಗು, ಮಲಯಾಳಂ, ಗುಜರಾತಿ, ಮರಾಠಿಗಳಿಗೂ ನೆರವು ನೀಡಿದರೂ ಒಳ್ಳೆಯದೇ. ಆದರೆ ಎಲ್ಲ ಭಾಷೆಗಳ ಅಧ್ಯಯನವೂ ಕನ್ನಡದ ತುಲನೆ ಯೊಂದಿಗೆ ಸಾಗಿದರೆ ಉತ್ತಮ. ದ್ವಿಭಾಷಿಕ ನಿಘಂಟುಗಳು, ಭಾಷಾಂತರ ಕೈಪಿಡಿಗಳು ಇತ್ಯಾದಿ ಹೊರತರುವುದು ಒಳ್ಳೆಯದು. ಕರ್ನಾಟಕ ಬಹುಭಾಷಾ ರಾಜ್ಯ ಎಂಬುದನ್ನೂ, ಪ್ರಜಾಪ್ರಭುತ್ವ ರಾಷ್ಟ್ರದಭಾಗ ಎಂಬುದನ್ನೂ ಮರೆಯದೇ ಕನ್ನಡ ಹಾಗೂ ಇತರ ಭಾಷೆಗಳ ಲಾಭವನ್ನು ಪಡೆದುಕೊಳ್ಳುವುದು ಉತ್ತಮ.

# ವಿವಿಧ ವಲಯಗಳಲ್ಲಿ ಕನ್ನಡ ಭಾಷಾಬಳಕೆ

ಡಾ. ಸೋಮಶೇಖರ ಗೌಡ

೧. ಹಿನ್ನೋಟ: ಸ್ವಾತಂತ್ರ್ಯದ ಐವತ್ತೊಂದು ವಸಂತಗಳು ಉರುಳಿವೆ. ನಲವತ್ತೆರಡನೇ ಕನ್ನಡ ರಾಜ್ಯೋತ್ಸವವನ್ನು ಆಚರಿಸಿದ್ದೇವೆ. ಇಪ್ಪತ್ತೊಂದನೆಯ ಶತಮಾನಕ್ಕೆ ಹೆಜ್ಜೆ ಇಡಲು ತುದಿ ಗಾಲಿನಲ್ಲಿ ನಿಂತಿದ್ದೇವೆ. ವಿಶ್ವಕನ್ನಡ ಸಮ್ಮೇಳನವನ್ನು ನಡೆಸಿದ್ದೇವೆ. ಕನ್ನಡ ವಿಶ್ವವಿದ್ಯಾಲಯ ವನ್ನೂ ಹೊಂದಿದ್ದೇವೆ. ನಾವು ಕರ್ನಾಟಕದವರು. ನಮ್ಮ ಭಾಷೆ ಕನ್ನಡ. ನಮ್ಮ ಈ ಕನ್ನಡ ನಮ್ಮೆಲ್ಲರ ಬದುಕಿನ ಜೀವನಾಡಿಯಾಗಿದೆಯೇ? ನಮ್ಮ ಸಮಾಜ ಸಂಸ್ಕೃತಿಯ ಒಡನಾಡಿ ಯಾಗಿದೆಯೇ? ನಮ್ಮ ಆಶೋತ್ತರಗಳ ಪ್ರತಿನಿಧಿಯಾಗಿದೆಯೇ? ಭವಿಷ್ಯದ ಬೆಳಕಿಂಡಿಯಾಗಿ ದೆಯೇ? ಉತ್ತರಕ್ಕಾಗಿ ವಿವಿಧ ವಲಯಗಳಲ್ಲಿ ಅದರ ಬಳಕೆಯನ್ನು ಗಮನಿಸಬೇಕಿದೆ.

'ಕ್ರಿ.ಶ.ಎರಡನೆಯ ಶತಮಾನಕ್ಕಿಂತ ಮೊದಲೇ ವ್ಯಾವಹಾರಿಕವಾಗಿ ಕನ್ನಡ ಭಾಷೆ ಬಳಕೆಯಲ್ಲಿತ್ತು. ದಕ್ಷಿಣ ಕನ್ನಡದ ಸಮುದ್ರತೀರ ಪ್ರದೇಶಗಳಲ್ಲಿನ ಜನ ಇದನ್ನು ನಿಚ್ಚಳ ವಾಗಿ ಬಳಸುತ್ತಿದ್ದರು' ಎಂದು ಗೋವಿಂದಪೈ ಅಭಿಪ್ರಾಯ ಪಡುತ್ತಾರೆ. ಮೌರ್ಯರು, ಶಾತ ವಾಹನರು, ಕದಂಬರು, ಚೋಳ, ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರದ ಅರಸರು ಕರ್ನಾಟಕದಲ್ಲಿ ಅಧಿಕಾರದಲ್ಲಿದ್ದಾಗ ಕನ್ನಡ ಭಾಷೆ ಆಡಳಿತ ಭಾಷೆಯಾಗಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ. ಮೈಸೂರು, ಶ್ರೀರಂಗಪಟ್ಟಣಗಳನ್ನು ಕೇಂದ್ರವಾಗಿಸಿ ಕೊಂಡಿದ್ದ ಹೈದ ರಾಲಿ, ಟಿಪ್ಪುಸುಲ್ತಾನರು ಆಡಳಿತದಲ್ಲಿ ಕನ್ನಡ ಬಳಕೆಗೆ ಅಪಸ್ವರ ಎತ್ತಿರಲಿಲ್ಲ ಎಂಬುದೂ ಗಮನಿಸಬೇಕಾದ ಅಂಶ.

ಬ್ರಿಟಿಷರು ಭಾರತದಲ್ಲಿ ಭಾಷಾ ಹೇರಿಕೆ ಮತ್ತು ದಬ್ಬಾಳಿಕೆಯನ್ನು ನಡೆಸಿದರೆಂಬುದು ನಿಜ. ಆದರೂ ಜಾನ್ ಮೆಕರಲ್‌ನಂಥ ಲೇಖಕರು, ಅಧಿಕಾರಿಗಳು ಸ್ಥಳೀಯ ಭಾಷೆಯಲ್ಲಿ ಅಧಿಕಾರ ನಡೆಸುವುದರ ಪ್ರಯೋಜನವನ್ನು ಒತ್ತಿ ಹೇಳಿದ್ದರು. ವಿವಿಧ ಹುದ್ದೆಗಳಲ್ಲಿ ಅಧಿಕಾರ ನಿರ್ವಹಿಸಿದ ಟಿ.ಜಿ.ಕ್ಲಾರ್ಕ್ ಎಂಬ ಬ್ರಿಟಿಷ್ ಅಧಿಕಾರಿ ತಮ್ಮ ಕಚೇರಿಗೆ ಬರುವ ಅರ್ಜಿಗಳು ಕನ್ನಡದಲ್ಲೇ ಇರಬೇಕೆಂದು ಆದೇಶಿಸಿದ್ದ. ಜೆ.ಹನ್ಸಟನ್ ಎಂಬ ಆಂಗ್ಲ ವೈದ್ಯಾಧಿ ಕಾರಿ ಆಸ್ಪತ್ರೆಯ ಸಹಾಯಕರ ಹುದ್ದೆಗಳನ್ನು ಪ್ರಾದೇಶಿಕ ಜನರಿಗೆ ಮೀಸಲಾಗಿಸಿ, ಅವರಿಗೆ ಕನ್ನಡ ಭಾಷೆಯ ಜ್ಞಾನ ಕಡ್ಡಾಯವಾಗಿ ಇರಬೇಕೆಂದು ಸೂಚಿಸಿದ್ದ. ಈ ನಿದರ್ಶನಗಳಿಂದ ಬ್ರಿಟಿಷರ ಕಾಲದಲ್ಲಿಯೂ ಆಡಳಿತದಲ್ಲಿ ಕನ್ನಡಕ್ಕೆ ಮಾನ್ಯತೆ ಇತ್ತು ಎಂಬುದು ತಿಳಿದು ಬರುತ್ತದೆ.

'ಕರ್ನಾಟಕದಲ್ಲಿ ಕನ್ನಡ ಸಾರ್ವಭೌಮ ಭಾಷೆಯಾಗಿರಬೇಕು. ಸರ್ವತ್ರ ಅದರ ಬಳಕೆಗೆ ಅವಕಾಶ ಇರಬೇಕು ಎಂಬುದು ಕರ್ನಾಟಕ ಸರ್ಕಾರದ(ಗಳ) ನಿಲುವು. ಹೀಗಾಗಿ ಅನೇಕ ಸರ್ಕಾರೀ ಆಜ್ಞೆಗಳು ಈ ಸಂಬಂಧವಾಗಿ ಹೊರಟಿವೆ. ಆಗಿಂದಾಗ್ಗೆ ಹೊರಡಿಸಲಾದ ಸುತ್ತೋಲೆಗಳ ಸಂಖ್ಯೆಯೇ ನಾಲ್ಕುನೂರರ ಗಡಿದಾಟಿದೆ. ೧೫-೭-೧೯೮೩ರಂದು ಹಳ್ಳಿಯ ಕೆಳಸ್ತರದ ಆಡಳಿತದಿಂದ ಹಿಡಿದು ವಿಧಾನಸೌಧದ ಉನ್ನತ ಆಡಳಿತದವರೆಗೆ ಸರ್ಕಾರದ ಎಲ್ಲ ಕಚೇರಿಗಳಲ್ಲೂ ಕನ್ನಡವನ್ನು ಆಡಳಿತಭಾಷೆಯಾಗಿ ಜಾರಿಗೆ ತರಬೇಕೆಂದು ಆಜ್ಞೆ ಮಾಡಲಾಯಿತು. ವಿವಿಧ ಇಲಾಖೆಗಳಲ್ಲಿ ಕನ್ನಡ ಬಳಕೆಯನ್ನು ಮತ್ತು ಸರ್ಕಾರದ ಕಾರ್ಯನೀತಿಗಳನ್ನು ಸಫಲಗೊಳಿಸಲು ೨೩-೬-೧೯೮೩ರಂದು 'ಕನ್ನಡ ಕಾವಲು ಸಮಿತಿ' ರಚಿಸಲಾಯಿತು. ಮುಂದೆ 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ವನ್ನೂ ಸಂಸ್ಥಾಪಿಸಲಾಯಿತು. ೧೯೮೫ರ ನವೆಂಬರ್ ೧ ರಿಂದ ೧೯೮೬ರ ನವೆಂಬರ್ ೧ರವರೆಗೆ 'ಸಮಗ್ರ ಕನ್ನಡ ಆಡಳಿತ ಭಾಷಾವರ್ಷ'ವನ್ನು ಆಚರಿಸಲು ಸರ್ಕಾರವೇ ಮುಂದಾಯಿತು. ಮತ್ತೆ ೧೯೯೦ರಲ್ಲಿ ಕರ್ನಾಟಕ ಸರ್ಕಾರ 'ಆಡಳಿತ ಭಾಷೆ ಕನ್ನಡ' ಎಂದು ಆದೇಶಿಸಿ ಅಧಿಕೃತ ಜ್ಞಾಪನವನ್ನು ಹೊರಡಿಸಿತು. ೧೯೭೩ರಲ್ಲಿಯೇ 'ಕರ್ನಾಟಕ' ಎಂದು ನಾಮಕರಣಗೊಂಡ ನಮ್ಮ ರಾಜ್ಯ ಇಷ್ಟೆಲ್ಲ ಬೆಂಬಲದ ನಡುವೆಯೂ ಕನ್ನಡದ ಬಳಕೆಗೆ ಸಂಬಂಧಪಟ್ಟಂತೆ 'ದೇವರಿಲ್ಲದ ಗುಡಿ' ಆಗಿಯೇ ಉಳಿದಿದೆ ಎಂಬ ಕೊರಗು ದೂರವಾಗಿಲ್ಲ.

**೨. ವಿವಿಧವಲಯಗಳಲ್ಲಿ ಕನ್ನಡ** : ಕನ್ನಡ ಭಾಷೆಯ ಬಳಕೆಯನ್ನು ಪ್ರಧಾನವಾಗಿ ಗುರುತಿಸಬೇಕಾದ್ದು ಶಿಕ್ಷಣ, ಕಾನೂನು ಮತ್ತು ಆಡಳಿತ, ಸಂವಹನ ಮಾಧ್ಯಮಗಳು ಹಾಗೂ ದೈನಂದಿನ ವ್ಯಾವಹಾರಿಕ ಚಟುವಟಿಕೆಗಳಲ್ಲಿ.

**ಅ. ಶಿಕ್ಷಣ** : ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಉನ್ನತ ಶಿಕ್ಷಣದವರೆಗೆ ಎಲ್ಲ ಹಂತಗಳಲ್ಲೂ ಕನ್ನಡವನ್ನು ಬಳಸಲು ಅವಕಾಶವಿದೆ. ಪ್ರಾಥಮಿಕ ಶಿಕ್ಷಣವನ್ನು ಕನ್ನಡದಲ್ಲಿ ಕಾಣುವುದು ಸರ್ಕಾರೀ ಶಾಲೆಗಳಲ್ಲಿ ಮಾತ್ರ. ಖಾಸಗಿ ಶಾಲೆಗಳಲ್ಲಿ ಇಂಗ್ಲಿಶ್ ಮೋಹದ ಕಾನ್ವೆಂಟುಗಳು. ಕಾನ್ವೆಂಟುಗಳಿಗೆ ಹೋಲಿಸಿದರೆ ಬೋಧನೆ, ಶುಚಿತ್ವ, ಶ್ರದ್ಧೆ, ಕಲಿಕೆಯ ಅನುಕೂಲ ಈ ಎಲ್ಲ ವಿಷಯಗಳಲ್ಲೂ ಸರ್ಕಾರಿ ಶಾಲೆಗಳು ವ್ಯಥೆಯನ್ನು ಹುಟ್ಟಿಸುತ್ತವೆ. ಪ್ರಾರಂಭದಲ್ಲಿಯೇ ಮಕ್ಕಳಲ್ಲಿ ಕನ್ನಡದ ಬಗೆಗೆ ಅನಾದರ, ನಿರಾಸಕ್ತಿ, ಕೀಳರಿಮೆ ಉಂಟುಮಾಡುವಲ್ಲಿ ಇವು ಪಾತ್ರವಹಿಸುತ್ತಿವೆ. ಸರ್ಕಾರ ಪ್ರಾಥಮಿಕ ಶಿಕ್ಷಣಕ್ಕೆ ವಿಶೇಷವಾದ ಆದ್ಯತೆ ಕೊಡುತ್ತಿದೆಯಾದರೂ, ಸರ್ಕಾರಿ ಶಾಲೆಗಳಲ್ಲಿನ ಕನ್ನಡದ ಗುಣಮಟ್ಟವನ್ನು ಕಾಪಾಡುವುದರಲ್ಲಿ, ತರಬೇತುಗೊಂಡ ಅಧ್ಯಾಪಕರನ್ನು ನೇಮಿಸುವುದರಲ್ಲಿ, ಕನಿಷ್ಟ ಸೌಲಭ್ಯವನ್ನು ಎಲ್ಲಾ ಶಾಲೆಗಳಿಗೂ ಒದಗಿಸಿ ಕೊಡುವುದರಲ್ಲಿ ಹಿಂದೆಬಿದ್ದಿದೆ. ಹೀಗಾಗಿ, ಕನ್ನಡದ ವರ್ಣಮಾಲೆಯನ್ನು ಸರಿಯಾಗಿ ಉಚ್ಚರಿಸಲೂ ಬಾರದಂಥ ಶಿಕ್ಷಕರು ಅಪಾರ ಸಂಖ್ಯೆಯಲ್ಲಿಸಿಗುತ್ತಾರೆ. ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣ ಇದಕ್ಕಿಂತ ಭಿನ್ನವಾಗೇನೂ ಇಲ್ಲ. ಒಂದರಿಂದ ಹತ್ತನೇ ತರಗತಿಗಳವರೆಗಿನ ವಿದ್ಯಾರ್ಥಿಗಳಿಗೆ ಬೇಕಾದ ಕನ್ನಡ ಪಠ್ಯ ಪುಸ್ತಕಗಳನ್ನು ಸಿದ್ಧಪಡಿಸುವಲ್ಲಿ

ಸರ್ಕಾರ ಕ್ರಮ ಕೈಗೊಂಡು, ಪಠ್ಯಪುಸ್ತಕ ನಿರ್ಮಾಣ ಸಮಿತಿಗಳನ್ನು ರಚಿಸುತ್ತದೆ. ಈ ಸಮಿತಿಗಳ ಸದಸ್ಯರು ವಿದ್ಯಾರ್ಥಿಗಳ ವಯಸ್ಸು, ತರಗತಿ, ಅಭಿರುಚಿ, ಆಸಕ್ತಿಗೆ ಹೊಂದಿ ಕೊಳ್ಳುವಂಥ ವಿಷಯಗಳನ್ನು ಆಯ್ದುಕೊಂಡು ಭಾಷೆಯಲ್ಲಿಗಮನಿಸುವುದರ ಬದಲು, ಆಕಾಶವಾಣಿ, ದೂರದರ್ಶನದ ಕಾರ್ಯಕ್ರಮ ನಿರ್ವಾಹಕರಂತೆ ರಾಷ್ಟ್ರನೀತಿಯನ್ನು, ಭಾವೈ ಕ್ಯತೆಯನ್ನು ಸಾಧಿಸಲು ಹವಣಿಸುವುದು ದುರ್ದೈವದ ಸಂಗತಿ.

ಕಾಲೇಜು, ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಎಲ್ಲ ಜ್ಞಾನಶಾಖೆಗಳಿಗೂ ಸಂಬಂಧಿಸಿದಂತೆ ಪಠ್ಯಪುಸ್ತಕಗಳು, ಪರಾಮರ್ಶನ ಗ್ರಂಥಗಳು ಕನ್ನಡದಲ್ಲಿ ದೊರಕುವುದು ಕಷ್ಟ. ಈ ನಿಟ್ಟಿನಲ್ಲಿ ಆಯಾ ಕ್ಷೇತ್ರದ ಅಧ್ಯಾಪಕರು, ಪ್ರಾಧ್ಯಾಪಕರು, ವಿಷಯತಜ್ಞರು ಕಾರ್ಯೋನ್ಮುಖರಾಗು ವುದು ಅನಿವಾರ್ಯ. ಹಾಗಿಲ್ಲವಾಗಿ ಕನ್ನಡದಲ್ಲಿ ಬರೆಯಲಿಚ್ಛಿಸುವ ವಿದ್ಯಾರ್ಥಿಗಳು ಸರಿಯಾದ ಮಾರ್ಗದರ್ಶನವಿಲ್ಲದೆ ಗೊಂದಲಕ್ಕೀಡಾಗುತ್ತಿದ್ದಾರೆ. ಇಂಗ್ಲಿಷಿನಲ್ಲಿ ಓದಿ, ಅರಗಿಸಿಕೊಂಡು, ಆಮೇಲೆ ತಾವೇ ಕನ್ನಡದಲ್ಲಿ ಬರೆಯುವಂಥದು ಯಾವುದೇ ಕನ್ನಡ ಮಾಧ್ಯಮದ ವಿದ್ಯಾರ್ಥಿಗೆ ನುಂಗಲಾರದ ತುತ್ತು.

ಆಯಾಯಾ ಮಾತೃಭಾಷೆಯಲ್ಲಿಯೇ ಶಿಕ್ಷಣ ದೊರಕಿಸಿಕೊಡಬೇಕಾದ್ದು ಸರಕಾರದ ಹೊಣೆ. ಏಕೆಂದರೆ, 'ಮಾತೃಭಾಷೆಯ ಮಾಧ್ಯಮ ಕಲಿಕೆಯ ಯಶಸ್ಸಿನ ಗುಟ್ಟು' ಎಂದು ಶಿಕ್ಷಣತಜ್ಞರು ಸಾರಿಹೇಳಿದ್ದಾರೆ. ಭಾಷಾವಿಜ್ಞಾನಿಗಳು ಮನವರಿಕೆ ಮಾಡಿಕೊಟ್ಟಿದ್ದಾರೆ. ರಾಷ್ಟ್ರಪಿತ ಗಾಂಧೀಜಿಯವರ ಅಭಿಪ್ರಾಯವೂ ಇದೇ. ಹೀಗಿರುವಾಗ, ಕನ್ನಡದ ಮಾಧ್ಯಮ ಶಿಕ್ಷಣದ ಎಲ್ಲ ಹಂತಗಳಲ್ಲಿಯೂ ವಿರಾಜಿಸಬೇಕಾದ್ದು ಅಪೇಕ್ಷಣೀಯ.

ಆದರೆ ಕನ್ನಡ ಮಾಧ್ಯಮದ ಬದಲು ಇಂಗ್ಲಿಶ್ ಮಾಧ್ಯಮದಲ್ಲಿಯೇ ಶಿಕ್ಷಣ ಇರಬೇಕೆಂದು ಬಯಸುವವರು ಮೂರು ವಿಧ :

೧. ಶಿಕ್ಷಣದ ಸಾರ್ಥಕ್ಯ ಇರುವುದು ಅಂತಾರಾಷ್ಟ್ರೀಯ ಭಾಷೆ ಇಂಗ್ಲಿಶ್‌ನಲ್ಲಿ ಕಲಿತಾಗಲೇ ಎಂದು ನಂಬಿ, ಇಂಗ್ಲಿಶ್ ಬಲ್ಲವನು ಮಾತ್ರ ವಿದ್ಯಾವಂತ ಎಂಬ ಭ್ರಮೆಯವರು.

೨. ಕಲಾ ವಿಷಯ ಅಥವಾ ಮಾನವಿಕ ವಿಷಯಗಳನ್ನು ಹೇಗಾದರೂ ಸಂಭಾಳಿಸಬಹುದು ಆದರೆ ವಿಜ್ಞಾನ ವಿಷಯಗಳ ಕಲಿಕೆಗೆ ಇಂಗ್ಲಿಶ್ ಅನಿವಾರ್ಯ ಎಂದು ತಿಳಿದವರು.

೩. ಪ್ರಾಥಮಿಕ ಶಿಕ್ಷಣ ಕನ್ನಡದಲ್ಲೇ ಇರಲಿ ಆದರೆ ಮುಂದಿನ ಶಿಕ್ಷಣಕ್ಕೆ ಮಾತ್ರ ಇಂಗ್ಲಿಶ್ ಇರಲೇಬೇಕು. ಇಲ್ಲವಾದರೆ ಪಠ್ಯಕ್ರಮ (syllabus), ಪಠ್ಯ ಪುಸ್ತಕ (text) ಹಾಗೂ ಶಿಕ್ಷಕರ ಕೊರತೆ ನೀಗಿ ಕೊಡುವವರು ಯಾರು? ಎಂದು ಪ್ರಶ್ನಿಸುವವರು.

ಇಂತಹ ಭ್ರಮಾಧೀನರಿಗೆ ವಿಶ್ವದಲ್ಲಿನ ಶೈಕ್ಷಣಿಕ ಚಟುವಟಿಕೆಗಳ ಅರಿವಿನ ಕೊರತೆ ಇರುವುದು ಸ್ಪಷ್ಟ. ಇಂಗ್ಲಿಶ್ ಇಲ್ಲದ ಪ್ರಪಂಚದ ಇತರ ದೇಶಗಳಲ್ಲಿ ಶಿಕ್ಷಣ ಹೇಗೆ ಅವರವರ ಮಾತೃಭಾಷೆಯಲ್ಲಿ ನಡೆಯುತ್ತಿದೆ ಎಂಬುದನ್ನು ಇಂತಹವರಿಗೆ ಮನದಟ್ಟು ಮಾಡಿಸಬೇಕು. ಜೊತೆಗೆ ಯಾವುದೇ ವಿಷಯಕ್ಕೆ ಭಾಷೆಗೆ ಸಂಬಂಧಿಸಿದ 'ಪಾರಿಭಾಷಿಕ' ಪದಗಳು ಸಾರ್ವತ್ರಿಕ

ವಾದವು; ಭಾಷಾಂತರಗೊಳಿಸದೆಯೇ ಅವುಗಳನ್ನು ಬಳಸಬಹುದು; ಇದರಿಂದ ಕಲಿಕೆಗಾಗಲೀ ಅಥವಾ ಭಾಷೆಗಾಗಲೀ ಅಪಚಾರವೆಸಗಿದಂತೇನೂ ಆಗುವುದಿಲ್ಲ ಎಂಬುದನ್ನು ಇವರಿಗೆ ಸ್ಪಷ್ಟಪಡಿಸುವುದು ಅಗತ್ಯ.

ವಿಜ್ಞಾನದಿಂದಾಗಿ ಈಗ ವಿಶ್ವವೇ ಒಂದು ಪುಟ್ಟ ಹಳ್ಳಿಯಂತಾಗಿದೆ. ಯಾವ ಭಾಷೆಯೂ ಅನ್ಯಭಾಷೆಯಿಂದ ಎರವಲು ಪಡೆಯದೇ ಬದುಕುಳಿಯುವುದು ಸಾಧ್ಯವಿಲ್ಲ. ಕನ್ನಡವಂತೂ ಬಹಳ ಹಿಂದಿನಿಂದಲೂ ಭಾಷಾಮಡಿವಂತಿಕೆಯಿಂದ ದೂರವಾಗಿಯೇ ಉಳಿದುಕೊಂಡು ಬಂದಿದೆ. ಹೀಗಾಗಿ ಕನ್ನಡದ ಮೂಲ ಪದಗಳ ಜೊತೆಗೆ ಇತರ ದ್ರಾವಿಡ ಭಾಷೆಗಳ, ಸಂಸ್ಕೃತದ, ಪ್ರಾಕೃತದ, ಮರಾಠಿಯ, ಪರ್ಷ್ಯೋಅರಾಬಿಕ್ ಮೂಲದ, ಹಾಗೆಯೇ ಇಂಗ್ಲಿಶ್‌ನ ಹೇರಳ ಸ್ವೀಕೃತ ಪದಗಳೂ ಸೇರಿಕೊಂಡಿವೆ. ಶಾಸ್ತ್ರಸಾಹಿತ್ಯವನ್ನು ನಿರ್ಮಾಣ ಮಾಡುವಾಗ ವಿಜ್ಞಾನದ ಸಾಹಿತ್ಯವನ್ನು ನಿರ್ಮಾಣಮಾಡುವಾಗ ಇವುಗಳನ್ನು ಅವಜ್ಞೆಗೀಡುಮಾಡಬೇಕಾದ ಅಗತ್ಯವಿಲ್ಲ.

ಕುವೆಂಪು ಅವರು ಹೇಳುವಂತೆ ಕನ್ನಡದ ಅಂಧಾಭಿಮಾನದಿಂದ ಇಂಗ್ಲಿಶ್‌ನ A B C ಗಳನ್ನು ಕನ್ನಡದಲ್ಲಿ ಅ ಬ ಕ ಗಳೆಂದು ಕರೆಯಬೇಕಾಗಿಲ್ಲ. ಇಂಗ್ಲೀಶ್ ಮಾಧ್ಯಮದಲ್ಲಿ ಓದಿದ್ದರೂ ಇಂಜಿನಿಯರಿಂಗ್‌ನ ಸಿಮೆಂಟು, ಕ್ರಾಂಕೀಟು, ಬೀಮು, ಪಿಲ್ಲರು, ವೈರು, ಸ್ಪಂಜು, ಬ್ರಷ್ಷು, ಪ್ಲಾನು, ಸೈಟು ಪದಗಳು ಕೆಲಸಗಾರರಿಗೆ, ಗಾರೆಯವರಿಗೆ, ಜೊತೆಗೆ ಸಾಮಾನ್ಯರಿಗೂ ಅರ್ಥವಾಗುತ್ತದೆ. ಇವುಗಳನ್ನು ಭಾಷಾಂತರಿಸುವುದೇಕೆ?. ಭಾಷಾಂತರಿಸು ವುದಾದರೆ ಲೇಸು. ಡ್ರಿಲಿಂಗ್‌ಮಿಷೀನ್, ಬೋರಿಂಗ್, ಹ್ಯಾಂಡ್ಲು, ಸ್ಕ್ರೂ, ನಟ್, ಬೋಲ್ಟ್, ಸ್ಕ್ರೂಡ್ರೈವರ್, ಸಾಲ್ಡರ್, ವೆಲ್ಡಿಂಗ್ ಇತ್ಯಾದಿ ಚಿರಪರಿಚಿತ ಪದಗಳಿಗೆ ಪರ್ಯಾಯ ಪದ ಗಳನ್ನು ಎಲ್ಲಿ ತರೋಣ? ಟೆಸ್ಟ್‌ಟ್ಯೂಬ್, ಫ್ಲಾಸ್ಕ್, ಲಿಟಮಸ್, ಪಪೆಟ್, ಬ್ಯೂರೆಟ್ ಗಳನ್ನು ಭಾಷಾಂತರಿಸಲು ಒದ್ದಾಡುವುದು ಅನಗತ್ಯ. 'ಟೆಸ್ಟ್‌ಟ್ಯೂಬಿಗೆ ಆಸಿಡ್ ಸುರಿದು ಅದನ್ನು ಸ್ಟರ್ ಮಾಡಿ' ಎಂದು ಬರೆದರೂ ಅದು ಕನ್ನಡವೆ ಎಂಬ ಕುವೆಂಪು ಅವರ ಸಲಹೆ ಅನುಕರಣೀಯ.

ತಾಂತ್ರಿಕ ಹಾಗೂ ವೈದ್ಯಕೀಯ ಶಿಕ್ಷಣದ ಪಾರಿಭಾಷಿಕ ಪದಗಳನ್ನು ಕನ್ನಡಕ್ಕೆ ಅನುವಾದಿಸಿಕೊಂಡು ಬಳಸುವ ಪರಿಪಾಠ ಸಾಕಷ್ಟು ನಡೆದಿದೆ. ಇಂಥ ಪಾರಿಭಾಷಿಕ ಪದಕೋಶಗಳೂ ಈಗ ಲಭ್ಯವಿದೆ. ಆದರೂ ಕನ್ನಡೀಕರಣಕ್ಕಾಗಿ ಪ್ರಚಲಿತ ಪದಗಳನ್ನು ತ್ಯಾಗಮಾಡಿ ಭಾಷಾಂತರದ ಪದಗಳನ್ನು ಅಪ್ಪಿಕೊಳ್ಳುವುದು ಮೂರ್ಖತನವೆಂದು ಶಿಕ್ಷಣ ತಜ್ಞರು ತೋರಿಸಿಕೊಟ್ಟಿದ್ದಾರೆ. ವೈದ್ಯಕೀಯದ 'ಆಪರೇಷನ್','ಇಂಜೆಕ್ಷನ್', 'ಬಿ.ಪಿ', 'ಕ್ಯಾನ್ಸರ್', 'ಎಕ್ಸ್-ರೇ', 'ಹಾರ್ಮೋನು', 'ರೆಟಿನಾ', ಇತ್ಯಾದಿ ಪರಿಚಿತ ಪದಗಳನ್ನು 'ಶಸ್ತ್ರಚಿಕಿತ್ಸೆ', 'ಚುಚ್ಚುಮದ್ದು', 'ರಕ್ತದೊತ್ತಡ', 'ಪಡಿಗಂಧಿ', 'ಕ್ಷಕಿರಣ', 'ಚೋದಕ', 'ಅಕ್ಷಿಪಟಲ' ಇತ್ಯಾದಿಯಾಗಿ ಭಾಷಾಂತರಿಸಿಕೊಳ್ಳುವ ಅಗತ್ಯ ಏನಿದೆ? ಇದು ಆಯಾಯಾ ವಿಷಯ ತಜ್ಞರು ವಿವೇಚನೆಯಿಂದ ನಿರ್ವಹಿಸಬೇಕಾದ ಕೆಲಸ.

ದಿನನಿತ್ಯದ ಚಟುವಟಿಕೆಯಲ್ಲಿ ಆಡುಮಾತಿನ ಭಾಗವಾಗಿ ಸೇರಿಹೋಗಿದ್ದ ಪೊಲೀಸು, ಇಂಜಿನಿಯರು, ಡಾಕ್ಟರು, ರೈಲು, ಜಡ್ಜು, ಲಾಯರು, ಸರ್ಕಲ್ಲು ಇತ್ಯಾದಿ ಪದಗಳನ್ನು ಆರಕ್ಷಕ, ಅಭಿಯಂತ, ವೈದ್ಯ, ಧೂಮಶಕಟ, ನ್ಯಾಯಾಧೀಶ, ವಕೀಲ, ವೃತ್ತ-ಹೀಗೆ ತರ್ಜುಮೆ ಮಾಡಿದ್ದನ್ನು ಪ್ರಾರಂಭಕ್ಕೆ ಜನರೇ ಪ್ರತಿಭಟಿಸಿದ್ದುಂಟು, ಸಾಹಿತಿಗಳು ನಗೆಪಾಟಲು ಮಾಡಿದುಂಟು. ಆದರೂ ಈ ಪದಗಳು ಜಾರಿಗೊಳ್ಳುವ ದೀಕ್ಷೆಯನ್ನು ಹೊಂದಿ ಒದ್ದಾಡು ತ್ತಿವೆ.

ಒಟ್ಟಿನಲ್ಲಿ ಶಿಕ್ಷಣದಲ್ಲಿ ಕನ್ನಡ ಬಳಕೆ, ಕೇವಲ ಮಾಧ್ಯಮ, ಪಠ್ಯಪುಸ್ತಕ ನಿರ್ಮಾಣ, ಪಾರಿಭಾಷಿಕ ಪದಸೃಷ್ಟಿ, ಬೋಧಕನ ಪರಿಣತಿ ಇತ್ಯಾದಿ ಸಮಸ್ಯೆಗಳಿಗಷ್ಟೇ ಸೀಮಿತವಾದು ದಲ್ಲ. ಇದರಲ್ಲಿ ಇರುವಂಥದ್ದು ಕನ್ನಡದ ಅಳಿವು ಉಳಿವಿನ ಪ್ರಶ್ನೆ. ಬಳಕೆಯಾಗದ ಭಾಷೆ ನೆಲಕಚ್ಚ ಬೇಕಾಗುತ್ತದೆ. ಇದಕ್ಕೆ ಅಭಿಜಾತ ಭಾಷೆಗಳ ನಿದರ್ಶನವೇ ಇದೆ. 'Disues atrophy' ನಿಯಮ ಕನ್ನಡ ಬಳಕೆಗೆ ಹೊರತಾಗಿ ಉಳಿಯುವುದು ಹೇಗೆ?

**ಆ. ಆಡಳಿತ :** ಕನ್ನಡ ಬಳಕೆಯ ಬೇರು ಆಳವಾಗಿ ಇಳಿಯಬೇಕಾದ್ದು ಆಡಳಿತದಲ್ಲಿ. ಜನ ಮತ್ತು ಸರಕಾರಗಳ ನಡುವಣ ಸೇತುವೆ ಆಡಳಿತಭಾಷೆ. ಜನರ ಭಾಷೆ ಆಡಳಿತದಲ್ಲಿ ಬಳಕೆಗೆ ಬಾರದೇ ಹೋದರೆ ಈ ಸೇತುವೆ ಕುಸಿಯುತ್ತದೆ. ಆಡಳಿತ ನಡೆಸಲು ಅಗತ್ಯವಾದ ತಾಕತ್ತು ತನಗಿದೆ ಎಂಬುದನ್ನು ಕನ್ನಡ ತೋರಿಸಿಕೊಟ್ಟಿದೆ. ಅದರ ಪೂರ್ವೇತಿಹಾಸವೇ ಇದಕ್ಕೆ ನಿದರ್ಶ ನವಾಗಿದೆ. ಹೀಗಿದ್ದೂ, ಆಡಳಿತಭಾಷೆಯಾಗಿ ಬಳಕೆಗೊಳ್ಳುವಲ್ಲಿ ಕನ್ನಡ ಹಿನ್ನಡೆ ಕಂಡಿದ್ದರೆ ಅದಕ್ಕೆ ಕಾರಣ ಸ್ವತಃ ಕನ್ನಡಿಗರು ಮತ್ತು ಆಡಳಿತಾರೂಢ ಅಧಿಕಾರಿಗಳು ಹಾಗೂ ಅವರನ್ನು ನಿಯಂತ್ರಿಸಲಾರದ ಸರಕಾರ.

ಕನ್ನಡಿಗರ ನಿರಭಿಮಾನ, ನಿರುತ್ಸಾಹ, ಹೊಣೆಗೇಡಿತನ, ತಾಟಸ್ಥ್ಯಮನೋಭಾವ, ಅಸಂ ಘಟನೆ ಅವರ ಭಾಷೆಯ ಇಂದಿನ ಪರಿಸ್ಥಿತಿಗೆ ಬಹುತೇಕ ಕಾರಣ ಎಂದರೆ ಅತ್ಯುಕ್ತಿ ಎನಿಸುವು ದಿಲ್ಲ. ಕನ್ನಡ ಪ್ರೇಮ ಅವರಲ್ಲಿ ನಿರಂತರವಾಗಿ ಜಾಗರವಾಡಿದ್ದರೆ ನೆಲ, ಜಲ, ಭಾಷೆಯ ಸಮಸ್ಯೆ ಕರ್ನಾಟಕದಲ್ಲಿ ಇಷ್ಟು ಉಲ್ಬಣಿಸುತ್ತಿರಲಿಲ್ಲ. ಮಹಾಜನ್‌ವರದಿ, ಮಹಿಷಿವರದಿ ಮೂಲೆ ಗುಂಪಾಗುತ್ತಿರಲಿಲ್ಲ. ಗೋಕಾಕ್ ಚಳುವಳಿಯ ಫಲ ನೆನೆಗುದಿಗೆ ಬೀಳುತ್ತಿರಲಿಲ್ಲ.

ಸರಕಾರೀ ಕಚೇರಿಗಳಲ್ಲಿ ದರಬಾರು ನಡೆಸುತ್ತಾ, ಐಷಾರಾಮವಾಗಿ ಉನ್ನತ ಅಧಿಕಾರ ಗಳನ್ನು ಹಿಡಿದು ಕರ್ನಾಟಕದಲ್ಲಿ ನಿರುಮ್ಮಳವಾಗಿರುವ ಐ.ಎ.ಎಸ್. ಅಧಿಕಾರಿಗಳಿಗೆ ಕನ್ನಡ ಇದ್ದರೆಷ್ಟು, ಹೋದರೆಷ್ಟು. ಕನ್ನಡ ನೆಲದಲ್ಲಿ ಅಧಿಕಾರದಕ್ಕಿದೆ. ಸೌಜನ್ಯಕ್ಕಾದರೂ ಅದನ್ನು ಕಲಿಯಬೇಕೆಂಬ ತಿಳುವಳಿಕೆ ಇವರಿಗಿದ್ದಂತಿಲ್ಲ. ಹೀಗಾಗಿ ಕನ್ನಡ ಆಡಳಿತದಲ್ಲಿ ಸಮಗ್ರವಾಗಿ ಜಾರಿಗೊಳ್ಳಲು ಇವರು ಅಡರುಗಾಲು ಹಾಕುತ್ತಾರೆ. ಇವರ ಇಂಗ್ಲಿಶ್ ಗತ್ತು ನಮ್ಮ ಕನ್ನಡಕ್ಕೆ ಕುತ್ತು.

ಇನ್ನು ಸರಕಾರ ನಡೆಸುವ ಶಾಸಕರು, ಸಚಿವರು ಬಹುಮಟ್ಟಿಗೆ ಈ ಐ.ಎ.ಎಸ್‌ಗಳ ಕೈ ಗೊಂಬೆಗಳಾಗಿರುತ್ತಾರೆ. ಅವರನ್ನು ನಿಯಂತ್ರಿಸಬೇಕಾದ ಇವರೆ ಅವರ ಕುಣಿತಕ್ಕೆ ತಾಳ ಹಾಕು ವಂತಾಗಿರುವುದರಿಂದ ಕನ್ನಡದ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿದೆ. ಸ್ವಶಕ್ತಿ ಇರುವ, ಮುಂದಾ ಲೋಚನೆಯುಳ್ಳ ಶಾಸಕರು, ಸಚಿವರಿಗೆ ಮಾತ್ರ ಐ.ಎ.ಎಸ್.ಗಳಿಂದ ಕನ್ನಡದ, ಕನ್ನಡಿಗರ ಪರವಾದ ಕೆಲಸ ಮಾಡಿಸಲು ಸಾಧ್ಯ.

ಅಂಚೆ-ತಂತಿ, ದೂರವಾಣಿ, ಆದಾಯತೆರಿಗೆ, ಜೀವವಿಮೆ, ರೈಲ್ವೆ ಇತ್ಯಾದಿಗಳು ನಿರಂತರ ಸಾರ್ವಜನಿಕ ಸಂಪರ್ಕವನ್ನು ಹೊಂದಿರುವ ಕೇಂದ್ರಾಡಳಿತ ಕಚೇರಿಗಳು. ಇಲ್ಲೆಲ್ಲ ಹೆಚ್ಚೂ ಕಡಿಮೆ ತ್ರಿಭಾಷಾ ಸೂತ್ರ ಜಾರಿಯಲ್ಲಿದೆ. ಇಂಗ್ಲಿಶ್, ಹಿಂದಿ ಭಾಷೆಗಳ ಜೊತೆಗೆ ಕನ್ನಡವೂ ಇಲ್ಲಿ ತಕ್ಕಮಟ್ಟಿಗೆ ಬಳಕೆಯಾಗುತ್ತಿದೆ. ಪೋಸ್ಟಾಫೀಸನ್ನು ಅಂಚೆಕಚೇರಿ, ಟೆಲಿಗ್ರಾಂಅನ್ನು ತಂತಿ, ಮಾಡಿದಂತೆ ವೈರ್‌ಲೆಸ್ ಅನ್ನು ನಿಸ್ತಂತು, ವಿತಂತು ಎಂದು ಅನುವಾದಿಸಲಾಗಿದೆ! ಆದರೆ ಕಾರ್ಡು, ಕವರು, ಡಿಪಾಸಿಟ್, ಮನಿಯಾರ್ಡರು ಪದಗಳೇ ಜಾರಿಯಲ್ಲಿವೆ.

ಫೋನ್ ಬದಲಾಗಿ ದೂರವಾಣಿ ಪದ ಬಳಕೆಯಲ್ಲಿದೆ ನಿಜ. ಆದರೆ 'ಫೋನ್ ಕಾಲ್' ಮಾಡಿದೆ ಎನ್ನುತ್ತೇವೆಯೇ ಹೊರತು 'ದೂರವಾಣಿ' ಕರೆ ಮಾಡಿದೆ ಎನ್ನುವುದಿಲ್ಲ. ಎಸ್.ಟಿ. ಡಿ, ಐ.ಎಸ್.ಡಿ, ಫ್ಯಾಕ್ಸ್, ಇಂಟರ್‌ಕಾಮ್ ಇತ್ಯಾದಿ ಪದಗಳು ವಿದ್ಯಾವಂತ ರಲ್ಲಿ ಚಲಾವಣೆ ಯಲ್ಲಿವೆ. ಇವುಗಳನ್ನು ಕನ್ನಡೀಕರಿಸುವ ಅಗತ್ಯವೂ ಇಲ್ಲವೆಂದು ತೋರು ತ್ತದೆ. ಟೆಲಿಫೋನ್ ಡೈರೆಕ್ಟರಿ, ಟೆಲಿಫೋನ್ ಬಿಲ್ಲುಗಳಾದಿಯಾಗಿ ಎಲ್ಲವೂ ಇಂಗ್ಲಿಶ್ ಮಯ. ಈ ಕಚೇರಿಗಳಲ್ಲಿ ಕನ್ನಡಿಗ ಉದ್ಯೋಗಿಗಳಿದ್ದರೂ, ಅವರಿಂದ ಪರಿಸ್ಥಿತಿ ಕನ್ನಡಕ್ಕೆ ಪೂರಕವಾಗಿಲ್ಲ.

ಆದಾಯ ತೆರಿಗೆ ಕಚೇರಿಗಳಲ್ಲಿ ನಾಮ ಫಲಕಗಳನ್ನು, ಅಧಿಕಾರಿಗಳ ಹೆಸರನ್ನು ಬಿಟ್ಟರೆ ಬೇರೇನೂ ಕನ್ನಡದಲ್ಲಿರುವುದಿಲ್ಲ. ಇದಕ್ಕೆ ಹೋಲಿಸಿದರೆ ರೈಲ್ವೆಸ್ಟೇಷನ್ ಅಥವಾ ರೈಲ್ವೆ ಕಚೇರಿಗಳು ಮೇಲು. ಜನರ ಕಣ್ಣಿಗೆ ಬೀಳುವಂತೆ ಅಗತ್ಯ ಸಲಹೆ, ಸೂಚನೆ, ಮಾಹಿತಿಗಳನ್ನು ಇಂಗ್ಲಿಶ್, ಹಿಂದಿಯ ಜೊತೆಗೆ ಕನ್ನಡದಲ್ಲೂ ಸ್ಟೇಷನ್ನಿನ ಗೋಡೆಗಳ ಮೇಲೆ, ಬೋರ್ಡುಗಳ ಮೇಲೆ ನಮೂದಿಸಿರುತ್ತಾರೆ. ಇಲ್ಲಿನ ಕನ್ನಡ ಬಳಕೆಗೆ ಕೆಲವು ಉದಾಹರಣೆಗಳಿವು :

ರದ್ದಿಯಾತಿ ಹಣ : Cancellation Money.
ಆವೇದನಾ ಪತ್ರ : Application form.
ಮೇಲೆ ಮಲಗುವ ಸ್ಥಳ : Upper birth.

ರಾಜ್ಯಸರ್ಕಾರದ ಆಡಳಿತ ಕಚೇರಿಗಳನ್ನು, ಸಾರ್ವಜನಿಕ ಸಂಪರ್ಕ ಇರುವ ಇಲಾಖೆಗಳು ಮತ್ತು ಸಾರ್ವಜನಿಕ ಸಂಪರ್ಕ ರಹಿತ ಇಲಾಖೆಗಳು ಎಂದು ವಿಂಗಡಿಸಿ ಕೊಳ್ಳಬಹುದು. ಯೋಜನೆ, ಸಾಂಖ್ಯಿಕ ವಿಭಾಗಗಳು, ಜನರಿಂದ ಸ್ವಲ್ಪ ದೂರ ಇರುವಂಥವು. ಆದರೆ ಪೊಲೀಸ್,

ಅಬ್ಕಾರಿ ಅರಣ್ಯ, ಕಂದಾಯ, ವಿದ್ಯುಚ್ಛಕ್ತಿ, ನಗರಸಭೆ, ಪುರಸಭೆ, ವ್ಯವಸಾಯ, ಸಾರ್ವಜನಿಕ ಶಿಕ್ಷಣ, ಸಹಕಾರಿ ಸಂಘಗಳ ಇಲಾಖೆ, ಖಜಾನೆ ಇಲಾಖೆ, ಕಾಲೇಜು ಶಿಕ್ಷಣ ಇಲಾಖೆ, ಸಮಾಜಕಲ್ಯಾಣ ಇಲಾಖೆ, ಉದ್ಯೋಗ ವಿನಿಮಯ ಮತ್ತು ತರಬೇತಿ ಇಲಾಖೆ, ಆಹಾರ ಸರಬರಾಜು ಇಲಾಖೆ, ನಗರಯೋಜನೆ ಇಲಾಖೆ, ಲೋಕೋಪಯೋಗಿ ಇಲಾಖೆ ಹಾಗೂ ಸರ್ಕಾರಿ ಆಸ್ಪತ್ರೆ ಇಲ್ಲೆಲ್ಲ ಜನರ ನಿರಂತರ ಎಡತಾಕುವಿಕೆ ಇದ್ದೇಇರುತ್ತದೆ. ಇವರಲ್ಲಿ ವಿದ್ಯಾವಂತರೂ ಇರುತ್ತಾರೆ, ಅವಿದ್ಯಾವಂತರೂ ಇರುತ್ತಾರೆ. ಆಡಳಿತ ಭಾಷೆಯ ವರ್ಣವೈವಿಧ್ಯ ಗೋಚರಿಸುವುದು ಇಲ್ಲಿಯೇ. ಇದರ ಸ್ವರೂಪವನ್ನು ಮುಂದೆ ವಿಶ್ಲೇಷಿಸ ಲಾಗಿದೆ.

**ಇ. ವ್ಯವಹಾರ :** ಒಬ್ಬ ವ್ಯಕ್ತಿಯ ಐಹಿಕ ಚಟುವಟಿಕೆಗಳೆಲ್ಲಾ ವ್ಯವಹಾರವೇ. ವ್ಯಾವಹಾರಿಕ ಕನ್ನಡ 'ವೃತ್ತಿ, ಕಸಬು, ವಾಣಿಜ್ಯ, ವಹಿವಾಟು, ವಾಡಿಕೆ, ಪದ್ಧತಿ' ಹಾಗೂ ನ್ಯಾಯಾಲಯದ ಕಟ್ಟಳೆಗಳವರೆಗಿನ ಎಲ್ಲ ಕಲಾಪಗಳನ್ನೂ ಒಳಗೊಳ್ಳುವಂಥದು. "ವ್ಯವಹಾರವೆಂಬುದು ಆಯಾ ಪ್ರದೇಶದ ಜನಕ್ಕೆ ಸೇರಿದ ವಿಚಾರ. ಆಳುವ ಸರ್ಕಾರ ಯಾವುದೇ ಇರಲಿ, ಅದರ ನಿರ್ವಹಣೆಯ ಭಾಷೆ ಯಾವುದೇ ಆಗಿರಲಿ, ಜನಸಾಮಾನ್ಯರು ತಂತಮ್ಮ ಭಾಷೆಗಳಲ್ಲೇ ನಿತ್ಯ ವ್ಯವಹಾರ ನಡೆಸುತ್ತ ಬಂದಿರುವುದು ಇತಿಹಾಸದಲ್ಲಿ ಕಂಡುಬರುವಂಥ ಸಂಗತಿ. ವ್ಯವಹಾರ ಸುಗಮವಾಗಲು ಯಾವುದೇ ವಹಿವಾಟಿಗೆ ಸಂಬಂಧಿಸಿದ ಉಭಯ ಕಕ್ಷಿಗಳ ನಡುವಣ ವಿಚಾರ ವಿನಿಮಯದಲ್ಲಿ ತೊಡಕುಂಟಾಗದಿರಲು, ಕರಾರನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅರ್ಥಮಾಡಿ ಕೊಳ್ಳುವಂಥ ಸಂದಿಗ್ಧ ಪರಿಸ್ಥಿತಿ ಉಂಟಾಗದಿರಲು ಅವರು ಉಭಯತಃ ಅರ್ಥವಾಗುವ ಭಾಷೆ ಯಲ್ಲೇ ಅದನ್ನು ನಡೆಸುವುದು ಸಹಜವಷ್ಟೇ ಅಲ್ಲ, ಅನಿವಾರ್ಯಕೂಡ. ಹೀಗಾಗಿ ಅಂಗಡಿ ಮುಂಗಟ್ಟುಗಳಲ್ಲಿ, ಪೇಟೆ ಪರಿಷೆಗಳಲ್ಲಿ ಜನರ ಭಾಷೆಯೇ ಬಹಳ ಹಿಂದಿನಿಂದಲೂ ಬಳಕೆ ಯಲ್ಲಿರುವುದನ್ನು ಕಾಣಬಹುದು. ಅನ್ಯ ಸಂಸ್ಕೃತಿಗಳ, ಅನ್ಯಭಾಷಿಕ ಜನರ ಸಂಪರ್ಕದಿಂದಾಗಿ ನಮ್ಮ ಭಾಷೆಯಲ್ಲಿ ಅನೇಕ ಹೊಸ ಪದಗಳು ಸೇರಿಕೊಂಡಿವೆಯಾಗಲಿ, ನಮ್ಮ ಭಾಷೆ ಅವುಗಳಿಂದ ಮಸುಳಿಸಿಲ್ಲ, ಪ್ರತಿಯಾಗಿ ಅದು ಇನ್ನಷ್ಟು ಸಂಪದ್ಯುಕ್ತವಾಗುತ್ತಲೇ ಬಂದಿದೆ" ಎಚ್ಚೆಸ್ಕೆ ಅವರ ಈ ಮಾತುಗಳು ವ್ಯಾವ ಹಾರಿಕ ಕನ್ನಡದ ಅಗತ್ಯ ಮತ್ತು ಸ್ವರೂಪವನ್ನು ನವಿರಾಗಿ ಬಿಂಬಿಸಿವೆ.

ಅನೇಕ ಶತಮಾನಗಳಿಂದ ವ್ಯವಹಾರದ ಭಾಷೆಯಾಗಿ ಎಲ್ಲ ರಂಗಗಳಲ್ಲೂ ಬಳಕೆ ಯಲ್ಲಿದ್ದ ಕನ್ನಡ, ಉತ್ಪಾದನೆ, ವ್ಯಾಪಾರ, ಸಾರಿಗೆ, ಮಾರುಕಟ್ಟೆ, ಉದ್ದಿಮೆ, ರೈಲ್ವೆ ಅನು ಕೂಲಗಳು ಹೆಚ್ಚಿದಂತೆಲ್ಲ, ಬಂಡವಾಳಶಾಹಿ, ಅಧಿಕಾರಶಾಹಿ ಪ್ರವರ್ಧಿಸಿದಂತೆಲ್ಲ, ದೂರದ ಜನರೂ, ಸ್ಥಳಗಳೂ ಹತ್ತಿರವಾದಂತೆಲ್ಲ ತನ್ನ ಸ್ಥಾನವನ್ನು ಇಂಗ್ಲಿಶ್‌ಗೆ ತೆರವು ಮಾಡುತ್ತ ಬಂತು. 'ಪಾಶ್ಚಾತ್ಯವಿಜ್ಞಾನ, ತಂತ್ರಜ್ಞಾನ, ಜೀವನ ವಿಧಾನ, ವ್ಯವಹಾರ ಪದ್ಧತಿಗಳು' ನಮ್ಮ ಅನುಭವದ ಪರಿಧಿಯನ್ನು ವೃದ್ಧಿಸುವುದರ ಜೊತೆಗೆ ಇಂಗ್ಲಿಶ್ ಮೋಹವನ್ನು ಕನ್ನಡದ ಬಗೆಗೆ ಕೀಳರಿಮೆಯನ್ನೂ ಬಿತ್ತಿ ಬೆಳೆದವು. ಆಧುನಿಕ ಅಗತ್ಯಕ್ಕೆ ನಮ್ಮ ಭಾಷೆಯನ್ನು ಒಗ್ಗಿಸಿ ಕೊಳ್ಳದೆ

ಇಂಗ್ಲಿಶ್‌ನ ದುರಾಕ್ರಮಣಕ್ಕೆ ತುತ್ತಾದೆವು. ತತ್ಫಲವಾಗಿ ವ್ಯಾವಹಾರಿಕ ಭಾಷೆಯಲ್ಲಿ 'ಕನ್ನಡತನ' ಎನ್ನುವುದು ಕಾಣೆಯಾಗಿದೆ. ಬೆಳಿಗ್ಗೆದ್ದು ಯಾರನ್ನಾದರೂ ಭೇಟಿಯಾದರೆ 'ಗುಡ್‌ಮಾರ್ನಿಂಗ್ ಎನ್ನುತ್ತೇವೆ'. ಬೀಳ್ಕೊಡಲು 'ಗುಡ್‌ಬೈ' ಹೇಳುತ್ತೇವೆ. ಮಲಗುವ ಮುನ್ನ 'ಗುಡ್‌ನೈಟ್' ಹೇಳುತ್ತೇವೆ. 'ನಮಸ್ಕಾರ, ಕುಶಲವೇ, ಆರೋಗ್ಯವೇ, ಚೆನ್ನಾಗಿದ್ದೀರ' ಇಂಥ ಶಿಷ್ಟಾಚಾರದ ಮಾತುಗಳು ಕನ್ನಡದಲ್ಲಿದ್ದರೂ ವ್ಯವಹಾರದಲ್ಲಿ ವಿದಾಯ ಹೇಳಿವೆ. ಇನ್ನೂ ನಮ್ಮ ಮಕ್ಕಳು ಡ್ಯಾಡಿ, ಮಮ್ಮಿ, ಎನ್ನದಿದ್ದರೆ ನಮಗೆ ಮುಜುಗರ. ಸ್ನೇಹವಲಯ ದಲ್ಲಿ ಅವು 'ಬೈ, ಸೀಯು' ಇತ್ಯಾದಿ ಹೇಳದಿದ್ದರೆ ಸಂಭಾಷಣೆಯೇ ಮುಗಿಯುವುದಿಲ್ಲ. ಅಷ್ಟೇಕೆ ನಾವು ಹಾಕುವ ಸಹಿ, ಬರೆಯುವ ಪತ್ರ, ನಮ್ಮ ಲೆಟರ್‌ಹೆಡ್, ವಿಸಿಟಿಂಗ್ ಕಾರ್ಡ್, ಆಹ್ವಾನ ಪತ್ರಿಕೆ, ಮನೆಯ ಮುಂದಣ ನಾಮಫಲಕ ಎಲ್ಲವೂ ಇಂಗ್ಲಿಶ್‌ಮಯ. ವಸ್ತುಸ್ಥಿತಿ ಹೀಗಿರುವಾಗ ವ್ಯವಹಾರದಲ್ಲಿ ಕನ್ನಡ ಬಳಕೆಯ ಬಗೆಗೆ ಪ್ರಶಂಸೆಯಾಗಿ ಮಾತನಾಡುವುದು 'ಬೋಳಜ್ಜಿ ತುರುಬು ನೆನಸಿ ಕೊಂಡಂತೆಯೆ'. ಈಗೀಗ ಈ ಇಂಗ್ಲಿಶ್ ವ್ಯಾಮೋಹದ ಸ್ಥಾನದಲ್ಲಿ ರಾಷ್ಟ್ರೀಯತೆಯ ದೃಷ್ಟಿ ಯಿಂದ ಹಿಂದಿಯನ್ನು ಸಂಸ್ಥಾಪಿಸುವ ಕೆಲಸ ವ್ಯವಸ್ಥಿತವಾಗಿ ಉತ್ತರದ ಅಧಿಕಾರಿಗಳಿಂದ ಸಾಗುತ್ತದೆ. ಒಂದು ರೀತಿಯಲ್ಲಿ ಇದು ಚೇಳಿನಸಂಗ ಬಿಟ್ಟು ಸರ್ಪದ ಸ್ನೇಹ ಬೆಳಸಿದಂತೆ.

**ಈ. ಕಾನೂನು :** "ಕಾನೂನು, ಕಾನೂನು ಸಂಸ್ಥೆಗಳು ಅಂದರೆ ನ್ಯಾಯಾಲಯಗಳು, ನ್ಯಾಯಾ ವಾದಿಗಳು ಮತ್ತು ಇದರ ಸಂಪರ್ಕ ಹೊಂದಿದ ಎಲ್ಲಾ ವ್ಯಕ್ತಿಗಳು" ಎನ್ನುತ್ತಾರೆ. ಸರಿತಾಕುಸು ಮಾಕರದೇಸಾಯಿ. "ನ್ಯಾಯಾಲಯದಲ್ಲಿ ಕನ್ನಡವೆಂದಾಗ ಅದಕ್ಕೆ ಹಲವಾರು ಮುಖಗಳಿವೆ. ಅದರಲ್ಲಿ ಒಳಾಡಳಿತ, ಪತ್ರವ್ಯವಹಾರ, ನ್ಯಾಯಾಲಯದಿಂದ ಜಾರಿಯಾಗುವ ನೋಟಿಸು ಗಳು, ಆದೇಶಿಕೆಗಳು, ಅಲ್ಲಿ ನಡೆಯುವ ನಡೆವಳಿಗಳು ಎಲ್ಲವೂ ಒಳಗೊಳ್ಳುತ್ತವೆ" ಇದು ಹೇಮಲತಾ ಮಹಿಷಿ ಅವರ ಅನುಭವದ ಮಾತು. ಮುಂದುವರಿದು ಅವರು ಹೀಗೆ ಹೇಳು ತ್ತಾರೆ. "ಸಿಬ್ಬಂದಿಯೊಂದಿಗೆ ವ್ಯವಹಾರ, ಹೊರಗಿನವರೊಂದಿಗೆ ಪತ್ರವ್ಯವಹಾರ ಇವುಗಳನ್ನು ಕನ್ನಡದಲ್ಲಿ ಮಾಡಲು ಹೆಚ್ಚಿನ ತೊಂದರೆ ಇಲ್ಲ. ಹಾಗೂ ಈಗಾಗಲೇ ಕನ್ನಡದಲ್ಲಿ ಮಾಡು ತ್ತಲೂ ಇದ್ದಾರೆ. ಆದರೆ, ನಾನಾ ಕಡತಗಳ ತಯಾರಿ, ನೋಟಿಸು-ಆದೇಶಿಕೆಗಳ ಮಾದರಿಗಳ ತಯಾರಿ ಆಗುವುದು ಅವಶ್ಯಕ".

ನ್ಯಾಯಾಲಯದ ವ್ಯವಹಾರ-ನಡವಳಿಕೆಗಳತ್ತ ಗಮನ ಹರಿಸಿದರೆ ಕ್ರಿಮಿನಲ್ ನ್ಯಾಯಾಲ ಯಗಳಲ್ಲಿ ಕನ್ನಡ ಬಳಕೆಯಾಗುವಷ್ಟು ಸಿವಿಲ್ ನ್ಯಾಯಾಲಯಗಳಲ್ಲಿ ಆಗುತ್ತಿಲ್ಲ. ಇದಕ್ಕೆ ಸ್ವಲ್ಪ ಮಟ್ಟಿಗೆ ಪೊಲೀಸರ ಕಾಣಿಕೆಯೂ ಇದೆ. ಏಕೆಂದರೆ, ಪೊಲೀಸರು ತೆಗೆದುಕೊಳ್ಳುವ ಹೇಳಿಕೆ, ಫಿರ್ಯಾದು, ಸಲ್ಲಿಸುವ ಆರೋಪಣಾಪತ್ರ, ಒದಗಿಸುವ ಸಾಕ್ಷ್ಯ ಇವೆಲ್ಲ ಕನ್ನಡದಲ್ಲಿ ರುತ್ತವೆ. ತೀರ್ಪು ಮತ್ತು ಆಜ್ಞೆಗಳು ಸಾಮಾನ್ಯವಾಗಿ ಇಂಗ್ಲಿಶ್‌ನಲ್ಲಿರುತ್ತವೆ. ಆದರೆ ಸಿವಿಲ್ ಕೋರ್ಟುಗಳಲ್ಲಿ ಇಂಗ್ಲಿಶ್ ಪ್ರಾಬಲ್ಯ ಮುಂದುವರೆದಿದೆ. ಸಾಕ್ಷಿದಾರ ಕನ್ನಡದಲ್ಲಿ ಸಾಕ್ಷಿ ಹೇಳಿದರೂ ನ್ಯಾಯಾಧೀಶರು ಅದನ್ನು ಇಂಗ್ಲಿಶ್‌ಗೆ ಅನುವಾದಿಸಿ ಡಿಕ್ಟೇಟ್ ಮಾಡುವ ಪದ್ಧತಿ

ಕೋರ್ಟುಗಳಲ್ಲಿದೆ. ಕನ್ನಡದ ತಿರುಳನ್ನು ಗ್ರಹಿಸಿ ಇಂಗ್ಲಿಶ್‌ಗೆ ಅನುವಾದ ಮಾಡುವಷ್ಟು ಶಕ್ತಿ ಇರುವ ನ್ಯಾಯಾಧೀಶರು ಕನ್ನಡದಲ್ಲೇ ತೀರ್ಪು ಕೊಡುವ ಪರಿಪಾಠ ರೂಢಿಸಿ ಕೊಂಡರೆ, ಕಾನೂನಿನಲ್ಲಿ ಕನ್ನಡ ಉಳಿದಂತೆಯೆ.

ಈ ನಿಟ್ಟಿನಲ್ಲಿ ವಕೀಲರಿಗೆ, ನ್ಯಾಯಾಧೀಶರಿಗೆ ಅನುಕೂಲವಾಗುವಂತೆ ಕಾನೂನು ಸಾಹಿತ್ಯವನ್ನು ಕನ್ನಡದಲ್ಲಿ ರೂಪಿಸಲಾಗಿದೆ. ಇಂಗ್ಲಿಶ್‌ನ ಹಲವಾರು ಕಾನೂನು ಕೃತಿಗಳು ಕನ್ನಡಕ್ಕೆ ಅನುವಾದಗೊಂಡಿವೆ. ಕನ್ನಡದಲ್ಲಿ ಪಾರಿಭಾಷಿಕ ಪದಗಳನ್ನು ಒದಗಿಸಲು ಕಾನೂನು ಪದಕೋಶ, ಆಡಳಿತ ಪದಕೋಶಗಳನ್ನು ತಯಾರಿಸಿ ಕೊಡಲಾಗಿದೆ. 'ಆರ್ಡಿನೆನ್ಸ್' ಪದಕ್ಕೆ 'ಅಧ್ಯಾದೇಶ' ಕ್ಕಿಂತ 'ಸುಗ್ರೀವಾಜ್ಞೆ ' ಹೆಚ್ಚು ಸೂಕ್ತ ಎನ್ನುವವರಿದ್ದಾರೆ. ಕೋರ್ಟು, ಮುನ್ಸಿಫ್, ಮ್ಯಾಜಿಸ್ಟ್ರೇಟ್, ಸಿವಿಲ್, ಕ್ರಿಮಿನಲ್, ಕೇಸು, ಜೈಲು ಇತ್ಯಾದಿಗಳನ್ನು ಅನುವಾದಿಸುವುದರ ಬಗೆಗೆ ಕಾನೂನುತಜ್ಞರ ವಿರೋಧವಿದೆ. ಕನ್ನಡದ ಮೂಲ ಪದಗಳಲ್ಲದ ಅರ್ಜಿ, ಫಿರ್ಯಾದಿ ದರ್ಖಾಸ್ತು, ಜುಲ್ಮಾನೆ, ಹರಾಜು, ವಕೀಲ, ಇವುಗಳನ್ನು ಯಥಾವತ್ತಾಗಿ ಉಳಿಸಿ ಕೊಳ್ಳಬೇಕೆಂಬುದು ಇವರ ಆಗ್ರಹ.

ಕನ್ನಡ ಚೆನ್ನಾಗಿ ಮಾತನಾಡಬಲ್ಲ, ಬರೆಯಬಲ್ಲ ಕಕ್ಷಿದಾರನೊಬ್ಬ ತನ್ನ ಇಂಗ್ಲಿಶ್ ಪತ್ರದಿಂದ ವಕೀಲರನ್ನು ಇಂಪ್ರೆಸ್ ಮಾಡಲು ಹೋದ ವಿಷಯವನ್ನು ಕುಸುಮಾಕರ ದೇಸಾಯಿಯವರು 'ನ್ಯಾಯಾಲಯಗಳಲ್ಲಿ ಕನ್ನಡ' ಎಂಬ ತಮ್ಮ ಲೇಖನವೊಂದರಲ್ಲಿ ದಾಖಲಿಸಿದ್ದಾರೆ. ಆ ಪತ್ರದ ಒಕ್ಕಣೆ ಹೀಗಿದೆ " Dear vakil saheeba Namaste, I am in the well, hope you are also in the well. Dont worry your fees, when I am in the middle I tell them to send fees, where 13 our case stands ?" ಇಂಥ ಇಂಗ್ಲಿಶ್ ಪ್ರಿಯ ಪ್ರಭೃತಿಗಳಿರುವಾಗ ಇಂಗ್ಲಿಶ್‌ನ ಜಾಗದಲ್ಲಿ ಕನ್ನಡವನ್ನು ಮರಳಿ ತರುವುದು ಸುಲಭದ ಮಾತೆ?

**ಉ. ಸಂವಹನ :** ಭಾಷೆಯೇ ಸಂವಹನದ ನೈಜ ಸೆಲೆ. ಸಮೂಹ ಮಾಧ್ಯಮಗಳು ಭಾಷೆಯನ್ನು ಬಿಟ್ಟು ಬದುಕಲಾರವು. ಭಾಷೆಗೂ ಅಷ್ಟೆ, ಸಮೂಹ ಮಾಧ್ಯಮಗಳ ಒಡನಾಟ ಬೇಕೇ ಬೇಕು. ಪತ್ರಿಕೆಗಳು, ರೇಡಿಯೋ, ದೂರದರ್ಶನ ಮತ್ತು ಚಲನಚಿತ್ರ ಸಮೂಹ ಮಾಧ್ಯಮಗಳಲ್ಲಿ ಅತ್ಯಂತ ಪ್ರಭಾವಶಾಲಿಯಾದವು. ಈ ಪ್ರಭಾವಶಾಲೀ ಮಾಧ್ಯಮಗಳು ಕನ್ನಡ ಭಾಷೆಯನ್ನು ಬಳಸಿಕೊಂಡಿರುವ ಬಗೆ ಪರಶೀಲನಾರ್ಹ.

ಕನ್ನಡ ಭಾಷೆ ಅತ್ಯಂತ ಸಮೃದ್ಧವಾಗಿ ಬಳಕೆಯಾಗುತ್ತಿರುವ ಯಾವುದಾದರೂ ಕ್ಷೇತ್ರ ಇದೆ ಎಂದಾದರೆ ಅದು ಪತ್ರಿಕೋದ್ಯಮ. ಕರ್ನಾಟಕದಲ್ಲಿ ಪತ್ರಿಕೋದ್ಯಮದ ಇತಿಹಾಸ ಬೆದಕಿದರೆ ಅದಕ್ಕೆ ೧೫೦ ವರ್ಷಗಳ ಹಿಂದಿನ ಚರಿತ್ರೆ ಇಲ್ಲ. ಆದರೆ ಪತ್ರಿಕೋದ್ಯಮದಲ್ಲಿ ಕಂಡುಬಂದ ಪ್ರಗತಿ ಆಧುನಿಕತೆಯ ನಾಗರಿಕತೆಯನಂಟು ಯಾರೂ ಮೆಚ್ಚುವಂಥದು. ಕನ್ನಡದಲ್ಲಿ ಎಷ್ಟು ಪತ್ರಿಕೆಗಳಿವೆ? ಯಾವ ಬಗೆಯವು? ಯಾವ ಧೋರಣೆಯವು? ಧ್ಯೇಯೋದ್ದೇಶ

ದವು? ಎಂಬ ವಿಚಾರ ಒತ್ತಟ್ಟಿಗಿರಲಿ. ಇವೆಲ್ಲ ಕನ್ನಡದ ಬಗೆಗೆ ಕಾಳಜಿಯನ್ನುಳ್ಳವು, ಕನ್ನಡವನ್ನು ಕಟ್ಟಲು ಕಂಕಣಧಾರಿಯಾದುವು ಎಂಬುದು ಸುಳ್ಳಲ್ಲ.

ಆಧುನಿಕ ಬದುಕಿನ ಅಗತ್ಯವನ್ನು ಈಡೇರಿಸುವಲ್ಲಿ ಪತ್ರಿಕೆಗಳ ಪಾತ್ರ ಹಿರಿದು. ದಿನನಿತ್ಯದ ವಾರ್ತೆಗಳನ್ನು ಒಟ್ಟುಗೂಡಿಸಿ, ಸಹಜ ಸರಳ ಕನ್ನಡದಲ್ಲಿ ತಿಳಿಯುವಂತೆ ಅಭಿವ್ಯಕ್ತಿಸಿ, ಓದುಗರನ್ನು ತಲುಪಲು ಒಂದು ಆಕಾರ ಹೊತ್ತು, ಬೆಳಗಾಗುವ ಮುನ್ನ ಬಾಗಿಲು ತಟ್ಟುವುದು ವೃತ್ತಪತ್ರಿಕೆ, ಓದುವವರಿಗೆ ಮಾತ್ರವಲ್ಲ ಓದಿಸಿ ಕೇಳುವವರಿಗೂ ಪತ್ರಿಕೆಯ ಆಕರ್ಷಣೆ ಅಪಾರ. ಸಾಹಿತ್ಯ, ಕಲೆ, ವಾಣಿಜ್ಯ, ವ್ಯಾಪಾರ, ಉದ್ಯಮ, ರಾಜಕಾರಣ ಹೀಗೆ ಜನಜೀವನದ ಎಲ್ಲ ಮಗ್ಗುಲುಗಳನ್ನು ಸಂಸ್ಪರ್ಶಿಸುವುದು ಇದರ ಜಾಯಮಾನ, ಸಮಯ ಸಂದರ್ಭಕ್ಕನುಗುಣವಾಗಿ ವಿಷಯಕ್ಕೆ ಒತ್ತುಕೊಡುವುದು ಇದರ ನೀತಿ. ಹೀಗೆ ಒತ್ತುಕೊಡಲಾದ ವಿಷಯ ಮುಖಪುಟದಲ್ಲಿ ರಾರಾಜಿಸುವುದುಂಟು. ಕನ್ನಡ ನಾಡು, ನುಡಿ, ಕಲೆ, ಸಾಹಿತ್ಯ ಇತ್ಯಾದಿಗಳಿಗೆ ಪತ್ರಿಕೆಗಳಿಂದ ಸಂದಿರುವ ಸೇವೆ ಎಣೆಯಿಲ್ಲದ್ದು. ಕರ್ನಾಟಕ ಏಕೀಕರಣ, ಕನ್ನಡ ಮಾಧ್ಯಮ, ಕನ್ನಡಪರ ಚಳುವಳಿಗಳೇ ಮುಂತಾಗಿ ಕನ್ನಡದ ಎಲ್ಲಾ ರಚನಾತ್ಮಕ ಪಕ್ರಿಯೆಗಳಲ್ಲಿ ಪತ್ರಿಕೆಗಳು ಮುಂಚೂಣಿಯಲ್ಲಿ ಕಾಣಿಸಿಕೊಂಡಿವೆ. ಅಷ್ಟೇ ಅಲ್ಲ ಪತ್ರಿಕೆಗಳಲ್ಲಿ ಕಂಡುಬರುವ ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ಅವು ಕೊಡುವ ರಕ್ಷಣೆ, ತೆರುವ ಬೆಲೆ ಅಪಾರ.

ವಿಷಯಕ್ಕನುಗುಣವಾಗಿ ಕನ್ನಡ ಭಾಷೆಯನ್ನು ಪತ್ರಿಕಾಕರ್ತರು ದುಡಿಸಿಕೊಳ್ಳುತ್ತಾರೆ. ಒಂದು ಸಂಪಾದಕೀಯದಲ್ಲಿ ಕಾಣಿಸುವ ಭಾಷೆಗೂ ವರದಿಯಲ್ಲಿ ಕಂಡುಬರುವ ಭಾಷೆಗೂ ವ್ಯತ್ಯಾಸ ಇರುತ್ತದೆ. ಹಾಗೆಯೇ ಅಪಘಾತ, ಕೊಲೆ, ಅತ್ಯಾಚಾರ, ಗಲಭೆಗಳಂತಹ ಘಟನೆ ಗಳನ್ನು ವರದಿ ಮಾಡುವಾಗ ಬಳಸುವ ಪದಗಳು, ಶೈಲಿ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ವಿಷಯಗಳನ್ನು ವಿವೇಚಿಸುವಾಗ ಬಳಕೆಯಾಗುವುದಿಲ್ಲ. ಪತ್ರಿಕೆಗಳಿಗೂ ನೀತಿ ಸಂಹಿತೆ ಇದೆ. ಇದನ್ನು ದಾಟುವ, ಮೀರುವ ಪತ್ರಿಕೆಗಳು, ತೇಜೋವಧೆ, ವ್ಯಕ್ತಿಸ್ವಾತಂತ್ರ್ಯ, ಸಾಮಾಜಿಕ ಸ್ವಾಸ್ಥ್ಯಗಳ ಮೇಲೆ ಹಲ್ಲೆಮಾಡುವ ಪೀತಪತ್ರಿಕೆಗಳಾಗುತ್ತವೆ. ಇತ್ತೀಚೆಗೆ ಕನ್ನಡದಲ್ಲಿ ಇಂಥ ಪತ್ರಿಕೆಗಳೂ ಹೆಚ್ಚಾಗುವುದು ದುರ್ದೈವದ ಸಂಗತಿ.

ಪತ್ರಿಕೆಗಳು ಭಾಷೆಗೆ ತುಂಬಿಕೊಡುವ ಕಸುವು ಅಸದೃಶವಾದುದು. ತಕ್ಷಣದ ಪದ ಸೃಷ್ಟಿ, ಅದಕ್ಕೆ ಹೊಂದುವಂಥ ಶೈಲಿ, ತನ್ಮೂಲಕ ಸ್ಫುರಿಸುವ ಅರ್ಥ ಇವೆಲ್ಲ ಕುತೂಹಲ ಕೆರಳಿಸುವಂಥವು. ಈ ದೃಷ್ಟಿಯಿಂದ ಕನ್ನಡ ಪತ್ರಿಕೆಗಳ ಭಾಷೆಯನ್ನು ಸಂಶೋಧನೆಗೆ ಒಳಗುಮಾಡುವುದು ಅಗತ್ಯ. ಕನ್ನಡದ ಪತ್ರಕರ್ತರು, ಅಂಕಣಕಾರರು, ಲೇಖಕರು ಕನ್ನಡಕ್ಕೆ ನೀಡಿರುವ ಸತ್ವ-ಶಕ್ತಿಗಳನ್ನು ವಿವೇಚಿಸುವುದು ಸುಲಭ ಸಾಧ್ಯವಲ್ಲ. 'ಪತ್ರಿಕಾ ಸಾಹಿತ್ಯ' ಅವಸರದ ಸೃಷ್ಟಿ ಎಂಬ ಅಡ್ಡಮಾತು ಇದ್ದರೂ, ಪತ್ರಿಕಾಬರಹ ಮುಖ್ಯ ಸಾಹಿತ್ಯಕ್ಕೆ ಸಾಮಗ್ರಿ ಮತ್ತು ಕಾರ್ಯಗಳೆರಡನ್ನೂ ಒದಗಿಸಿಕೊಡುತ್ತದೆ. 'ಸಾಹಿತಿಗಳ ಭಾಷೆ ಪತ್ರಿಕೆಗಳಿಗೆ ಒಗ್ಗದ್ದು' ಎಂದು ಪತ್ರಿಕಾಕರ್ತರು ಮೂಗುಮುರಿದರೆ, ಗಾಢವಾದ ಅನುಭವ, ಆಳವಾದ ದೃಷ್ಟಿ, ಅಪೂರ್ವ ಚಿತ್ರಣ

ಇಲ್ಲದ ಬರೆಹವನ್ನು 'ಪತ್ರಿಕಾವರದಿಯಂತಿದೆ' ಎಂದು ಸಾಹಿತಿಗಳು ಹೀಯಾಳಿಸುವುದುಂಟು. ಇದನ್ನು ಗಮನಿಸಿದ ಡಿ.ವಿ.ಜಿ. ಅವರು "ಪತ್ರಿಕೆಗಳು ಮೇಲ್ಮಟ್ಟದ ಗ್ರಂಥದ ಭಾಷೆಗೂ, ಕೆಳಮಟ್ಟದಲ್ಲಿರುವ ಸಾಮಾನ್ಯ ಭಾಷೆಗೂ ಮಧ್ಯಸ್ಥಗಾರನಂತಿದ್ದು ಕೆಳಗಿನದನ್ನು ಮೇಲಿನ ಕಡೆಗೆ ಎತ್ತುತ್ತಿರಬೇಕು" ಎಂದು ಹೇಳುವ ಮೂಲಕ ಪತ್ರಿಕೆಗಳ ಕರ್ತವ್ಯವನ್ನು ನಿರ್ದೇಶಿಸಿದ್ದಾರೆ.

ಕನ್ನಡದ ಪತ್ರಿಕೆಗಳು ಲೆಟರ್ ಪ್ರಿಂಟಿಂಗ್‌ನಿಂದ ಈಗ ಆಫ್‌ಸೆಟ್ ಮುದ್ರಣದ ಕಡೆಗೆ ವಾಲುತ್ತಿವೆ. ಫೋಟೋಟೈಪ್ ವ್ಯವಸ್ಥೆ, ರೇಡಿಯೋ ಫೋಟೋ ಸೌಲಭ್ಯ, ಟೆಲಿಗ್ರಾಂ ಮತ್ತು ಟೆಲಿಪ್ರಿಂಟರ್ ವ್ಯವಸ್ಥೆ (ತಂತಿ ಮತ್ತು ದೂರ ಮುದ್ರಣ) ಕನ್ನಡಕ್ಕಿನ್ನೂ ಬರಬೇಕಾಗಿದೆ.

"ಆಕಾಶವಾಣಿ, ವಿವಿಧ ವಿನೋದಾವಳಿಗಳನ್ನು ಪೂರೈಸುವ ಸಂಸ್ಥೆಯಲ್ಲ, ಜನತೆಯ ಕಲ್ಯಾಣ, ಪ್ರಗತಿ, ಮಾಹಿತಿ, ಹಕ್ಕುಬಾಧ್ಯತೆ, ಹೊಣೆಗಾರಿಕೆಯ ಅರಿವು, ಆಧುನಿಕತೆ, ವೈಜ್ಞಾನಿಕ ಮನೋವೃತ್ತಿ, ಆರೋಗ್ಯ, ಅಭಿವೃದ್ಧಿಗಳತ್ತ ಲಕ್ಷ್ಯಹರಿಸುವಂತೆ ಮಾಡಲು ಸರ್ವಪ್ರಯತ್ನ" ನಡೆಸುವಂಥದು ಎನ್ನುತ್ತಾರೆ ಜ್ಯೋತ್ಸ್ನಾ ಕಾಮತ್. ಕನ್ನಡದ ಸವಿಯನ್ನು ನಿರಕ್ಷರ ಕುಕ್ಷಿಗಳಿಗೂ ನಾಡಿನ ಮೂಲೆ ಮೂಲೆಯಲ್ಲೂ ಮುಟ್ಟಿಸುವ ಏಕೈಕ ಸಮೂಹ ಮಾಧ್ಯಮ ಇದು. ಅಕ್ಷರ ಸಂಸ್ಕೃತಿಯಿಂದ ವಂಚಿತರಾದ ಗಿರಿಜನರಿಗೆಲ್ಲ ಮನರಂಜನೆ ಮತ್ತು ಜ್ಞಾನಾರ್ಜನೆಯ ಸಂಪನ್ಮೂಲ ರೇಡಿಯೋ, ಹೀಗಾಗಿ ರೇಡಿಯೋದಲ್ಲಿ ಬಳಕೆಯಾಗುವ ಕನ್ನಡದಲ್ಲಿ ಸಾಧ್ಯವಾದ ಮಟ್ಟಿಗೆ ಗ್ರಂಥಸ್ಥತೆ, ಸಂಸ್ಕೃತ ಭೂಯಿಷ್ಠತೆ, ಇಂಗ್ಲಿಶ್ ನಿಷ್ಠತೆಯನ್ನು ನಿವಾರಿಸಿರುತ್ತಾರೆ. ಜಾಗತಿಕ ಸಮಾಚಾರವನ್ನು ಬಿತ್ತರಿಸುವುದಕ್ಕೆ ಗ್ರಾಂಥಿಕ ಭಾಷೆಯನ್ನೇ ಉಪಯೋಗಿಸಬೇಕಾಗಿ ಬಂದರೂ ಅದು ನೇರ ಹಾಗೂ ಸರಳವಾಗಿರುತ್ತದೆ. ಅಲಂಕಾರ, ಹೋಲಿಕೆ, ಉತ್ಪ್ರೇಕ್ಷೆಗಳನ್ನು ಬಳಸಿ ವೇಳೆಯ ಅಪವ್ಯಯ ಮಾಡುವಂತಿಲ್ಲ ಇಲ್ಲಿ. ಪ್ರತಿನಿತ್ಯದ ಆಗು ಹೋಗುಗಳನ್ನು ಜನತೆಗೆ ಮುಟ್ಟಿಸುವ ಜವಾಬ್ದಾರಿಯಷ್ಟೇ ಆಕಾಶವಾಣಿಯ ವಾರ್ತೆಯದು.

ಕನ್ನಡದ ಸಂಗೀತ, ಸಾಹಿತ್ಯ, ಜಾನಪದ, ನಾಟಕ, ಸಣ್ಣಕಥೆ, ಚಲನಚಿತ್ರ-ಇತ್ಯಾದಿಗಳನ್ನೆಲ್ಲ ಕೇಳುಗರಿಗೆ ವ್ಯವಸ್ಥಿತವಾಗಿ ಮುಟ್ಟಿಸುವಲ್ಲಿ ಮಹತ್ವದ ಪಾತ್ರ ವಹಿಸಿದೆ ಆಕಾಶವಾಣಿ. ಹಿರಿಯ ಕವಿಗಳ ಭಾವಗೀತೆಗಳು, ಕಿರಿಯ ಕವಿಗಳ ಸ್ವರಚಿತ ಕವನಗಳು ಆಕಾಶವಾಣಿಯಿಂದ ಸಾಕಷ್ಟು ಪ್ರೋತ್ಸಾಹ ಪಡೆದಿವೆ. ಜಾನಪದ ಹಾಡುಗಳನ್ನು ಲೋಕಪ್ರಿಯಗೊಳಿಸುವುದರಲ್ಲಿ ರೇಡಿಯೋಗೆ ವಿಶೇಷ ಆಸಕ್ತಿ. ಪ್ರತಿಭಾವಂತ ಜನಪದ ಕಲಾವಿದರನ್ನು ಕರೆಸಿ ಅವರ ಸಾಹಿತ್ಯ, ಸಂಗೀತವನ್ನು ಧ್ವನಿಮುದ್ರಿಸಿಕೊಂಡು ಕಾಲಕಾಲಕ್ಕೆ ಪ್ರಸಾರ ಮಾಡುವ ಮೂಲಕ ಜನರ ಆಸಕ್ತಿ ಕೆರಳಿಸುವ ಕೆಲಸವನ್ನು ಆಕಾಶವಾಣಿ ಮಾಡುತ್ತಾ ಬಂದಿದೆ. ಹೀಗೆಯೇ ಯಕ್ಷಗಾನ, ಗೊಂಬೆಯಾಟ, ರಂಗನಾಟಕಗಳೂ ಆಕಾಶವಾಣಿಯ ಪ್ರಸಾರದಲ್ಲಿ ಜನರನ್ನು ತಲುಪಿವೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳು ಬಾನುಲಿಯ ರಾಷ್ಟ್ರೀಯ ಪ್ರಸಾರದಲ್ಲಿ ಆಗಾಗ ಬಿತ್ತರಗೊಳ್ಳುತ್ತಿರುತ್ತವೆ.

ದೂರದರ್ಶನಕ್ಕಿಂತ ಮೊದಲು ವಿವಿಧ ಕ್ರೀಡೆಗಳ ವೀಕ್ಷಕ ವಿವರಣೆಯನ್ನು ಪ್ರಚಾರಕ್ಕೆ ತಂದಿದ್ದು ಆಕಾಶವಾಣಿ. ಹಾಕಿ, ಕ್ರಿಕೆಟ್, ಫುಟ್‌ಬಾಲ್, ಟೆನಿಸ್ ಇತ್ಯಾದಿ ಆಟಗಳು ರಾಜ್ಯ, ರಾಷ್ಟ್ರ ಮಟ್ಟದಲ್ಲಿ ಅವುಗಳ ಕಾಮೆಂಟ್ರಿಯನ್ನು ಕನ್ನಡದಲ್ಲಿ ಕೊಡುವ ಕೆಲಸವನ್ನು ಮಾಡಿ ಆಕಾಶವಾಣಿ ಕ್ರೀಡಾಸಕ್ತರ ಅಭಿಮಾನಕ್ಕೆ ಪಾತ್ರವಾದದ್ದಿದೆ. ಕ್ರಿಕೆಟ್ ಆಟದ ವೀಕ್ಷಕ ವಿವರಣೆ ಕೊಡುವಾಗ ಕನ್ನಡತನ ಹೋಗಿ 'ಬ್ಯಾಟ್ಸ್‌ಮನ್' ಅನ್ನು 'ದಾಂಡಿಗ', 'ವಿಕೆಟ್‌ಕೀಪರ್' ಅನ್ನು 'ಗೂಟರಕ್ಷಕ' ಎಂದೆಲ್ಲ ಕರೆದು ಅಪಹಾಸ್ಯಕ್ಕೆ ಗುರಿಯಾದದ್ದೂ ಇದೆ. ಇತ್ತೀಚೆಗೆ ಪಾರಿಭಾಷಿಕ ಶಬ್ದಗಳನ್ನೇ ಧಾರಾಳವಾಗಿ ಬಳಸುವಂಥ ಪ್ರವೃತ್ತಿ ಹೆಚ್ಚಾಗಿದೆ. ಇಷ್ಟಕ್ಕೂ ಈ ಮೂಲಕ ವೀಕ್ಷಕ ವಿವರಣೆಯಲ್ಲಿ ಜನ ಆಸಕ್ತಿ ಕಳೆದುಕೊಳ್ಳುತ್ತಿದ್ದಾರೆ ದೂರದರ್ಶನದ ದಾಳಿಯಿಂದಾಗಿ.

ಸಾಂಸ್ಕೃತಿಕ ಚಟುವಟಿಕೆಗಳ ಪ್ರತ್ಯಕ್ಷ ವರದಿ, ವೈಭವದ ದಸರಾ ಮೆರವಣಿಗೆಯ ಪ್ರತ್ಯಕ್ಷ ವೀಕ್ಷಕ ವಿವರಣೆ, ಕುಂಭಮೇಳ, ಮಹಾಮಸ್ತಕಾಭಿಷೇಕ ಪ್ರತ್ಯಕ್ಷ ವಿವರಣೆ, ಆಕಾಶವಾಣಿ ಪ್ರಸಾರ ಮಾಡುವ ಪರಂಪರೆಯನ್ನು ಹೊಂದಿದೆ. ಇದು ಶಾಲಾಕಾರ್ಯಕ್ರಮ, ಯುವವಾಣಿ, ಮಹಿಳಾಕಾರ್ಯಕ್ರಮ, ಕೃಷಿರಂಗ, ಇತ್ಯಾದಿಗಳಲ್ಲಿ ವಿದ್ಯಾರ್ಥಿಗಳಿಗೆ, ಯುವಕರಿಗೆ, ಸ್ತ್ರೀಯರಿಗೆ, ರೈತರಿಗೆ ಮಾತೃಭಾಷೆಯಲ್ಲಿ ಮಾಹಿತಿ ನೀಡುತ್ತದೆ ಕೂಡ. ಆಕಾಶವಾಣಿಯ ಆಡಳಿತ ಕಚೇರಿಯಲ್ಲಿ ಕನ್ನಡದ ಬಳಕೆ ಶೂನ್ಯವಾದರೂ ಪ್ರಸಾರದಲ್ಲಿ ಅದರ ಬಳಕೆ ಪ್ರೀತ್ಯರ್ಹವಾಗಿದೆ. ಆಕಾಶವಾಣಿ ಸಂಪೂರ್ಣವಾಗಿ ಕನ್ನಡ ವಾಣಿಯಾಗಬೇಕೆಂಬುದು ಕನ್ನಡಿಗರ ಅಪೇಕ್ಷೆ.

ಆಕಾಶವಾಣಿಗಿಂತಲೂ ದೂರದರ್ಶನ ಪರಿಣಾಮಕಾರೀ ಸಮೂಹ ಮಾಧ್ಯಮ, ಅದು ಶ್ರವಣ ಮಾಧ್ಯಮವಾದರೆ, ಇದು ದೃಶ್ರವಣ ಮಾಧ್ಯಮ. ಆದರೆ ಆಕಾಶವಾಣಿಯಲ್ಲಿ ಕನ್ನಡ ಬಳಕೆಯಾದಂತೆ ದೂರದರ್ಶನದಲ್ಲಿ ಬಳಕೆಯಾಗುತ್ತಿಲ್ಲ. ದೂರದರ್ಶನ. ದವರು ಕನ್ನಡವನ್ನು ಇನ್ನೂ ಒಗ್ಗಿಸಿಕೊಳ್ಳಬೇಕಾಗಿದೆ. ದೂರದರ್ಶನಕ್ಕೆ ಹೋಲಿಸಿದರೆ ಉದಯ ಟಿ.ವಿ. ಹೆಚ್ಚು ಜನಾದರಣೀಯವಾಗಿದೆ, ಡಿ.ಡಿ. ೯ ರಲ್ಲಿ ಕನ್ನಡ ಕಾರ್ಯಕ್ರಮಗಳು ಬರುತ್ತವಾದರೂ ಹಳೇ ಸಿನಿಮಾ ವೀಕ್ಷಣೆಯ ಸಮಯಕ್ಕಷ್ಟೇ ಜನರು ಈ ಚಾನಲ್ ಕಾಯುವುದು ಗಮನಾರ್ಹ ಅಂಶ. ವಾರ್ತೆಗಳನ್ನು ಬಿತ್ತರಿಸುವಲ್ಲಿ ತಪ್ಪಾಗಿ ಮಾಡುತ್ತಿದ್ದ ಕನ್ನಡದ ಉಚ್ಚಾರಣೆ ಈಗ ಸುಧಾರಿಸಿದೆ ಓದುವವರಲ್ಲಿ. ಆಕಾಶವಾಣಿಯಂತೆಯೇ ದೂರದರ್ಶನ. ದವರು ವೈವಿಧ್ಯ ಮಯ ಕನ್ನಡ ಕಾರ್ಯಕ್ರಮಗಳನ್ನು ಕಿರುತೆರೆಯಮೇಲೆ ಮೂಡಿಸುತ್ತಾರಾದರೂ ಅವುಗಳ ಆಕರ್ಷಣೆಗೆ ಸೀರಿಯಲ್‌ಗಳು, ಸಿನಿಮಾಗಳಷ್ಟು ಜನರು ವಾಲಿದಂತೆ ಅನಿಸುವುದಿಲ್ಲ. ಇತ್ತೀಚಿನ ಸಿಟಿ ಕೇಬಲ್ ಹಾವಳಿಯಿಂದಾಗಿ ನೂರಾರು ಪ್ರತಿಷ್ಠಿತ ಚಾನಲ್ ಲಭ್ಯವಿರುವಾಗ ಡಿ.ಡಿ.ವೀಕ್ಷಣೆ ಸಮಾಚಾರ ಕೇಳುವಷ್ಟಕ್ಕೆ ಸೀಮಿತವಾಗಿರುವುದು ತಿಳಿದುಬರುತ್ತದೆ. ತಮ್ಮ ಅಭಿರುಚಿಗೆ ತಕ್ಕಂತೆ ಆಯ್ಕೆ ಮಾಡಿಕೊಂಡು ವೀಕ್ಷಿಸುವ ಅವಕಾಶ ಇರುವಾಗ; ಡಿಸ್ಕವರಿ, ಬಿ.ಬಿ.ಸಿ., ಸ್ಟಾರ್ ಟಿ.ವಿ., ಜೀ ಟಿ.ವಿ., ಎಂ.ಟಿ.ವಿ.ಗಳು ವೈವಿಧ್ಯ ಕಾರ್ಯಕ್ರಮಗಳನ್ನು ದೊರಕಿಸಿಕೊಡುವಾಗ ಸೀಮಿತ ಅವಧಿಯ ದೂರದರ್ಶನಕ್ಕೆಲ್ಲಿದೆ ಆಸ್ಪದ.

ಒಂದು ಭಾಷೆಯ ಅಭ್ಯುದಯದಲ್ಲಿ ಆ ಪ್ರಾಂತ್ಯದ ಸಂಸ್ಕೃತಿ, ಕಲೆಗಳಂತೆಯೇ ಚಲನ ಚಿತ್ರವೂ ಮಹತ್ವದ ಪಾತ್ರವಹಿಸುತ್ತಿದೆ ಅಷ್ಟೇ ಅಲ್ಲ, ಅದೊಂದು ಪ್ರಭಾವಶಾಲೀ ಮಾಧ್ಯಮವೂ ಹೌದು. ಕನ್ನಡ ಚಿತ್ರರಂಗದಲ್ಲಿ ಪ್ರಾರಂಭಕ್ಕೆ ಕಂಡುಬರುತ್ತಿದ್ದ ಸದಭಿರುಚಿ, ಕಲೆಗಾರಿಕೆ, ಸಂಗೀತ-ಸಾಹಿತ್ಯದ ಮಧುರ ಬಾಂಧವ್ಯ ಈಗಿನ ಸಿನಿಮಾಗಳಲ್ಲಿ ಕಾಣಸಿಗುವುದು ದುರ್ಲಭ. ಆಗೆಲ್ಲ ಕನ್ನಡದ ಹೆಸರಾಂತ ಲೇಖಕರ ಕಾದಂಬರಿಗಳು ಚಲನಚಿತ್ರಗಳಾಗಿ ಕೀರ್ತಿ ಪಡೆದವು. ಚಿತ್ರ ಸಾಹಿತ್ಯವನ್ನು ವೃತ್ತಿನಿರತ ಸಾಹಿತಿಗಳ ಜತೆಗೆ ಕವಿಗಳೂ, ಕಾದಂಬರಿಕಾರರು ರಚಿಸುತ್ತಿದ್ದರು. ಕನ್ನಡದ ಮೇಲೆ ಅಭಿಮಾನ ಇದ್ದಂಥ ನಿರ್ದೇಶಕರ ದಂಡೇ ಇತ್ತು. ಸಾಮಾಜಿಕ, ಪೌರಾಣಿಕ, ಐತಿಹಾಸಿಕ, ಜಾನಪದೀಯ ವಸ್ತುಗಳ ಚಿತ್ರಗಳು ಕಣ್ಮನ ತಣಿಸುತ್ತಿದ್ದವು. ಕನ್ನಡದ ಪತಾಕೆ ಹಾರಿಸುತ್ತಿದ್ದವು. ಈಗ ಹಣ ಚೆಲ್ಲುವ ನಿರ್ಮಾಪಕರಿದ್ದಾರೆ. ಅವರ ಅಭಿರುಚಿಗೆ ಮಣೆಹಾಕುವ ನಿರ್ದೇಶಕರಿದ್ದಾರೆ, ಮರ್ಯಾದೆ ಮಾರಿ ಚೆಲ್ಲುಚೆಲ್ಲಾಗಿ ಅಭಿನಯಿಸುವ ನಟನಟಿಯರಿದ್ದಾರೆ. ಕೀಳು ಸಾಹಿತ್ಯ, ದ್ವಂದ್ವಾರ್ಥ ಸಂಭಾಷಣೆ, ಕೆಟ್ಟಹಾಡುಗಳು ಹೇರಳವಾಗಿ ಇಂದಿನ ಕನ್ನಡ ಚಿತ್ರಗಳಲ್ಲಿ ಕಂಡುಬರುತ್ತವೆ. ಆಮದು ನಟನಟಿಯರು, ನಿರ್ದೇಶಕರು, ನಿರ್ಮಾಪಕರು ತುಂಬಿ ತುಳುಕುತ್ತಿರುವ ಕನ್ನಡ ಚಿತ್ರರಂಗದಲ್ಲಿ ಕನ್ನಡದ ಬಳಕೆ ಈಗ ಕಬ್ಬಿಣದ ಕಡಲೆ.

**ಊ. ಇತರ ವಲಯಗಳು :** ಪ್ರಾತಿನಿಧಿಕವಾಗಿ ಈವರೆಗೆ ಪ್ರಸ್ತಾಪಿಸಲಾದ ವಲಯಗಳ ಹೊರತಾಗಿ, ಕನ್ನಡ ಭಾಷಾಬಳಕೆಯ ದೃಷ್ಟಿಯಿಂದ ಪರಿಭಾವಿಸಬೇಕಾದ ಹಲವಾರು ವಲಯ ಗಳಿವೆ. ಉದಾಹರಣೆಗೆ ಕರ್ನಾಟಕದಲ್ಲಿರುವ ಕಾರ್ಖಾನೆಗಳು ಹಾಗೂ ವಿವಿಧ ಉದ್ಯಮ ಗಳಲ್ಲಿ ಇಂಗ್ಲಿಶ್ ಪ್ರಿಯ ಅಧಿಕಾರಿಗಳು, ಕನ್ನಡ ಓದಲು ಬರುವ ಆದರೆ ಬರೆಯಲು ಬಾರದ ಕನ್ನಡಿಗರು, ಹೊರನಾಡ ಕಾರ್ಮಿಕರು ಕನ್ನಡ ಬಳಸುವ ಪರಿ ಕುತೂಹಲಕರ. ಹಾಗೆಯೇ ಬ್ಯಾಂಕು ಉದ್ಯಮದಲ್ಲಿ, ವಯಸ್ಕರ ಶಿಕ್ಷಣದಲ್ಲಿ, ಶಿಕ್ಷಣದ ಉನ್ನತ ಸಂಶೋದನೆಗಳಲ್ಲಿ, ವಿಶ್ವವಿದ್ಯಾನಿಲಯಗಳ ಆಡಳಿತದಲ್ಲಿ, ಸೃಜನಶೀಲ-ಸೃಜನೇತರ ಸಾಹಿತ್ಯ ದಲ್ಲಿ, ಹವ್ಯಾಸಿ ಮತ್ತು ವೃತ್ತಿ ರಂಗಭೂಮಿಯಲ್ಲಿ, ನೃತ್ಯ-ಸಂಗೀತ, ಚಿತ್ರಕಲೆಗಳಲ್ಲಿ, ಜನ ಪದ ಸಾಹಿತ್ಯದಲ್ಲಿ, ಅಧ್ಯಾತ್ಮ ಕೃಷಿಯಲ್ಲಿ, ಪುಸ್ತಕೋದ್ಯಮದಲ್ಲಿ, ಕಂಪ್ಯೂಟರ್‌ನಲ್ಲಿ, ಆಧುನಿಕ ಸಂವಹನ ಸವಲತ್ತುಗಳಲ್ಲಿ, ಒಳನಾಡು-ಗಡಿನಾಡು-ಹೊರನಾಡು ಮತ್ತು ವಿದೇಶೀ ಪರಿಸರದಲ್ಲಿ-ಹೀಗೆ ಪಟ್ಟಿ ಮಾಡ ಬಹು ದಾದ ನೂರಾರು ನಿಟ್ಟಿನಲ್ಲಿ ಕನ್ನಡ ಸ್ಥಿತಿ-ಗತಿಯನ್ನು ಸಮೀಕ್ಷಿಸಲು ಸಾಧ್ಯ. ಒಂದೊಂದನ್ನು ಪ್ರತ್ಯೇಕವಾಗಿ ಅಧ್ಯಯನಕ್ಕೆ, ಸಂಶೋಧನೆಗೆ ಒಳಗು ಮಾಡಲು ಸಾಧ್ಯ. ಆಗಷ್ಟೇ ವಿವಿಧ ವಲಯಗಳಲ್ಲಿ ಬಳಕೆಯಾಗಿರುವ ಕನ್ನಡದ ಸಮಗ್ರ ಚಿತ್ರಣ ದೊರಕುವಂಥದು.

**ಋ. ಕನ್ನಡ ಅಂಕಿ :** 'ಕನ್ನಡ ಅಂಕಿ ಕನ್ನಡ ಭಾಷೆಯ ಅವಿಭಾಜ್ಯ ಅಂಗ'. ಕನ್ನಡ ಅಂಕಿಗಳ ಸ್ಥಾನವನ್ನು ಇಂಗ್ಲಿಶ್ ಅಂಕಿಗಳು ಕಿತ್ತುಕೊಂಡಿವೆ. ಮುಕ್ಕಾಲುಪಾಲು ಕನ್ನಡಿಗರಿಗೆ ಕನ್ನಡ

ಅಂಕಿಗಳ ಪರಿಚಯವಿಲ್ಲ. ಕನ್ನಡ ಲೇಖಕರೇ ಇವುಗಳನ್ನು ಬಳಸುತ್ತಿಲ್ಲ. ಕನ್ನಡ ಲಿಪಿಗೂ ಕನ್ನಡ ಅಂಕಿಗೂ ಅಪೂರ್ವ ಹೊಂದಾಣಿಕೆ ಇದೆ. ಇದು ಬಹಳ ಜನರಿಗೆ ಗೊತ್ತಿಲ್ಲ. ಕನ್ನಡ ಬರವಣಿಗೆಯ ಸೌಂದರ್ಯ. ಇನ್ನಷ್ಟು ವರ್ಧಿಸಲು (ಕನ್ನಡ ಅಂಕಿಗಳನ್ನು ನಾವು ತಪ್ಪದೇ ಬಳಸಬೇಕು. ಕನ್ನಡ ಅಂಕಿಗಳ ಪರಿಚಯವಿಲ್ಲ. ಕನ್ನಡ ಲೇಖಕರೇ ಇವುಗಳನ್ನು ಬಳಸುತ್ತಿಲ್ಲ. ಕನ್ನಡ ಲಿಪಿಗೂ ಕನ್ನಡ ಅಂಕಿಗೂ ಅಪೂರ್ವ ಹೊಂದಾಣಿಕೆ ಇದೆ. ಇದು ಬಹಳ ಜನರಿಗೆ ಗೊತ್ತಿಲ್ಲ. ಕನ್ನಡ ಬರವಣಿಗೆಯ ಸೌಂಧರ್ಯ ಇನ್ನಷ್ಟು ವರ್ಧಿಸಲು ಕನ್ನಡ ಅಂಕಿಗಳನಾಮ ತಪ್ಪದೇ ಬಳಸಬೇಕು.) 'ಕನ್ನಡ ಅಂಕಿಗಳನ್ನೇ ಬಳಸಿ' ಆಂದೋಲನವನ್ನು ಸ್ವಯಂ ಸ್ಫೂರ್ತಿಯಿಂದ ಡಾ.ಎಂ.ಎನ್.ವಿ. ಪಂಡಿತಾರಾಧ್ಯ ಅವರು ಮಾಡುತ್ತಾ ಬಂದಿದ್ದಾರೆ. 'ಕನ್ನಡ ಅಂಕಿಗಳ ಪಾದ್ರಿ' ಎಂಬ ಅಭಿಮಾನದ ಅಡ್ಡ ಹೆಸರಿಗೆ ಪಾತ್ರರಾಗಿರುವ ಇವರು ಈ ನಿಟ್ಟಿನಲ್ಲಿ ಉಂಟುಮಾಡುತ್ತಿರುವ ಜಾಗ್ರತಿ ಕಡೆಗಣಿಸುವಂಥದಲ್ಲ. ಒಂದು ಸಂಸ್ಥೆ ಮಾಡ ಬಹುದಾದ ಕೆಲಸವನ್ನು ಒಬ್ಬ ವ್ಯಕ್ತಿ ಮಾಡಿ ತೋರಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಕಟಣೆಗಳಲ್ಲಿ ಕನ್ನಡ ಅಂಕಿಗಳ ಜೊತೆಗೆ ಇಂಗ್ಲಿಶ್ ಅಂಕಿಗಳೂ ಬಳಕೆಯಾಗುತ್ತಿವೆ. ಸಂಪೂರ್ಣವಾಗಿ ಕನ್ನಡ ಅಂಕಿಗಳನ್ನೇ ವ್ಯವಹಾರ-ಆಡಳಿತದಲ್ಲಿ ಎಲ್ಲೆಲ್ಲೂ ಕಾಣುವಂಥ ದಿವಸಗಳು ಬೇಗ ಬರಬೇಕಾಗಿದೆ. ಸರಕಾರವೂ ಈಗ ಒತ್ತಾಸೆ ನೀಡಿದೆ.

**೨. ಆಡಳಿತ ಭಾಷಾ ವಿಶ್ಲೇಷಣೆ :** ಆಡಳಿತ ಭಾಷೆ ಮೂರು ಮುಖ್ಯ ಮಜಲುಗಳಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ.

ಅ. ಜನರು ಸರಕಾರದೊಡನೆ ನಡೆಸುವ ವ್ಯವಹಾರ

ಆ. ಸರಕಾರ ಜನರೊಡನೆ ನಡೆಸುವ ವ್ಯವಹಾರ

ಇ. ಸರಕಾರದ ಆಡಳಿತಾಂಗದೊಳಗೇ ನಡೆಯುವ ವ್ಯವಹಾರ.

ಜನರು ತಮ್ಮ ಅಹವಾಲು, ಬೇಡಿಕೆ, ದೂರುಗಳನ್ನು ಒಕ್ಕಣೆ, ಪತ್ರ, ಅರ್ಜಿಗಳ ಮುಖಾಂತರ ಸರಕಾರಕ್ಕೆ ಸಲ್ಲಿಸುತ್ತಾರೆ. ಇವೆಲ್ಲಾ ಅವರವರ ಭಾಷಾ ಸಾಮರ್ಥ್ಯಕ್ಕನುಗುಣ ವಾಗಿ ಇರುತ್ತವೆ. ಇಲ್ಲವೇ ಒಂದು ಸಾಂಪ್ರದಾಯಿಕ ಮಾದರಿಯನ್ನನುಸರಿಸಿ ಬರೆದವಾಗಿರು ತ್ತವೆ. ಹೀಗಾಗಿ ಇಲ್ಲಿ ಪಾರಿಭಾಷಿಕ ಪದಬಳಕೆ ಕಡಿಮೆ. ವಾಕ್ಯಗಳಲ್ಲಿ ಸಂಕೀರ್ಣತೆ, ಅರ್ಥ ದಲ್ಲಿ ಸಂದಿಗ್ಧತೆ ಇಲ್ಲದೆ ಇದ್ದರೂ ಸುದೀರ್ಘ ವಿವರಣೆ ಇರಲು ಸಾಧ್ಯ.

ಸರಕಾರ ಜನರಿಗೆ ತನ್ನ ನಿರ್ಧಾರ, ಕ್ರಮ, ಯೋಜನೆ, ವಿಧಿವಿಧಾನಗಳನ್ನು, ಪ್ರಕಟಣೆ ಗಳನ್ನು ತಿಳಿಸುವುದು ಅಷ್ಟು ಸುಲಭವಲ್ಲ. ಏಕೆಂದರೆ ಸಮಾಜದ ಎಲ್ಲ ಸ್ತರದ ಜನಗಳನ್ನು, ರಾಜ್ಯದ ಎಲ್ಲ ವರ್ಗದ ಜನಗಳನ್ನು, ಎಲ್ಲ ಭಾಷೆಯ ಜನಗಳನ್ನು ಅದು ಮುಟ್ಟಬೇಕು. ಹೀಗಾಗಿ, ಸರಕಾರ ಬಳಸುವ ಕನ್ನಡ ಎಲ್ಲರನ್ನು ತಲಪುವಂಥ ಸ್ವರೂಪವಾಗಿರಬೇಕು. ಸ್ಪಷ್ಟತೆ, ನಿಖರತೆ, ಅಸಂದಿಗ್ಧತೆ, ಸಂಕ್ಷಿಪ್ತತೆ ಅದರ ಗುಣವಾಗಿರಬೇಕು. ಇಲ್ಲಿ ಭಾಷೆಯ ಪಾರಿಭಾಷಿಕತೆ ಗಿಂತ ಸರಳತೆಗೆ ಆದ್ಯತೆ ಹೆಚ್ಚು.

ಸರಕಾರದ ಒಳಗೇ ನಡೆಯುವ ಆಡಳಿತದಲ್ಲಿ ಬಳಕೆಯಾಗುವ ಕನ್ನಡ ಹೆಚ್ಚು ತಾಂತ್ರಿಕವಾದುದು, ಗ್ರಂಥಸ್ಥವಾದುದು ಮತ್ತು ಪಾರಿಭಾಷಿಕ ಪದಗಳಿಂದ ಕೂಡಿದ್ದು. ಏಕೆಂದರೆ ಇಲ್ಲಿ ಕೆಲಸಮಾಡುವ, ಚರ್ಚೆ ನಡೆಸುವ ಮಂದಿ, ಎಲ್ಲರೂ ವಿದ್ಯಾವಂತರು. ಇವರ ವಿದ್ಯಾಭ್ಯಾಸದಮಟ್ಟ ಬೇರೆ ಬೇರೆ ಇರಬಹುದು. ಕೇಸ್‌ವರ್ಕರ್ ಹಾಕುವ ಟಿಪ್ಪಣಿ, ಅಧಿಕಾರಿ ಕೈಗೊಳ್ಳುವ ನಿರ್ಣಯ, ಇವರ ನಡುವೆ ಓಡಾಡುವ ಫೈಲು, ಇವೆಲ್ಲ ಒಂದು ಬಗೆಯ ಆಡಳಿತ ಚೌಕಟ್ಟನ್ನು ಭಾಷೆಗೆ ಹೇರುತ್ತವೆ, ಪಾರಿಭಾಷಿಕ ಪದಗಳನ್ನು ತುಂಬುತ್ತವೆ., ವಿಶಿಷ್ಟ ಬಗೆಯ ವಾಕ್ಯರಚನೆಯನ್ನು ನಿರ್ಮಿಸುತ್ತವೆ.

**ಪಾರಿಭಾಷಿಕ ಪದಗಳು :** ಆಡಳಿತದಲ್ಲಿ ಬಳಕೆಯಾಗುವ ಪಾರಿಭಾಷಿಕ ಪದಗಳಿಗೆ ಕೆಲವು ಪರಿಮಿತೆ ಹಾಗೂ ಗುಣಗಳಿರುತ್ತವೆ. ಸಂಕ್ಷಿಪ್ತತೆ ಅಂಥ ಗುಣಗಳಲ್ಲೊಂದು. ಇದರಿಂದ ಅನಪೇಕ್ಷಿತ ವಿವರಣೆಗೆ ಆಡಳಿತದಲ್ಲಿ ಅವಕಾಶ ಇಲ್ಲದಂತಾಗುತ್ತದೆ. 'ಕರಾರು' (agreement) ಎಂಬ ಈ ಆಡಳಿತ ಕನ್ನಡದ ಪದವನ್ನು ವಿವರಿಸಲು ಹೊರಟರೆ ನಾಲ್ಕಾರು ವಾಕ್ಯಗಳು, ಅಷ್ಟೇಕೆ ಒಂದು ಪರಿಚ್ಛೇದ (para)ವೇ ಬೇಕಾದೀತು. ಒಂದು ಪಾರಿಭಾಷಿಕ ಪದ ಒಂದೇ ಅರ್ಥಕ್ಕೆ ಪರಿಮಿತಗೊಳ್ಳಬೇಕು, ಅದಕ್ಕಿಂತ ಹೆಚ್ಚೂ ಬೇಡ ಕಡಿಮೆಯೂ ಬೇಡ. 'ನೀರು ಗಂದಾಯ'(water tax) ನೀರು ಬಳಕೆಗೆ ಹಾಕಿದ ತೆರಿಗೆಯಷ್ಟೇ. ಅದು ಮನೆ ಕಂದಾಯ ಜಮೀನು ಕಂದಾಯಕ್ಕಿಂತ ಭಿನ್ನ ಎಂಬುದು ಸ್ಪಷ್ಟ. ಹೀಗೆ ಪಾರಿಭಾಷಿಕ ಪದಗಳು ಆಡಳಿತ ಭಾಷೆಗೆ ನಿಖರತೆ ಮತ್ತು ಮಿತವ್ಯಯವನ್ನು ಸಾಧಿಸಿಕೊಡುತ್ತವೆ. ಪಾರಿಭಾಷಿಕ ಪದಗಳ ಇತರ ಗುಣಲಕ್ಷಣಗಳೆಂದರೆ ;

ಅ. ಉತ್ಪಾದಕತೆ
ಆ. ಪಾರದರ್ಶಕತ್ವ
ಇ. ಸ್ಪಷ್ಟತೆ
ಈ. ಅರ್ಹತೆ

'ಉತ್ಪಾದಕತೆ' ಪಾರಿಭಾಷಿಕ ಪದಕ್ಕಿರಬೇಕಾದ ಮೂಲಗುಣ. ಉತ್ಪಾದಕತ್ವವಿಲ್ಲದ ಪದ ಆಡಳಿತದಲ್ಲಿ ಬಳಕೆಗೆ ಅನರ್ಹ. ವ್ಯುತ್ಪನ್ನ ಪ್ರಕ್ರಿಯೆ (derivation)ಯಿಂದಾಗಲೀ, ಪ್ರತ್ಯಯೀಕರಣ (affixation) ದಿಂದಾಗಲೀ ಒಂದು ಪಾರಿಭಾಷಿಕ ಪದದಿಂದ ಅನೇಕ ಅಂಥ ಪದಗಳು ಸಿದ್ಧಿಸುವ ಸಾಧ್ಯತೆ ಇರಬೇಕು. ಉದಾ : 'ವಿದ್ಯೆ' ಮತ್ತು 'ಶಿಕ್ಷಣ' ಈ ಪದಗಳನ್ನು ಆಡಳಿತ ದಲ್ಲಿ ಗಮನಿಸಿ. 'ವಿದ್ಯೆ' ಪದದಿಂದ ವಿದ್ಯಾಇಲಾಖೆ, ವಿದ್ಯಾಮಂತ್ರಿ ಇತ್ಯಾದಿ ಪದಗಳನ್ನು ರೂಪಿಸಿಕೊಳ್ಳಬಹುದು. ಆದರೆ ಇದಕ್ಕಿಂತ ಹೆಚ್ಚು ಉತ್ಪಾದಕತೆ 'ಶಿಕ್ಷಣ' ಪದದಲ್ಲಿ ಕಂಡುಬರು ತ್ತದೆ. 'ಶಿಕ್ಷಣಇಲಾಖೆ', 'ಶಿಕ್ಷಣಸಚಿವ', 'ಉಚ್ಚಶಿಕ್ಷಣ', 'ತಾಂತ್ರಿಕ ಶಿಕ್ಷಣ', 'ವೈದ್ಯಕೀಯ ಶಿಕ್ಷಣ', ಹೀಗೆ. ಕನ್ನಡದಲ್ಲಿ ಇಂಗ್ಲಿಶ್‌ನ 'Letter'ಗೆ ಪರ್ಯಾಯವಾಗಿ ಎರಡು ಪದಗಳು ಚಾಲನೆಯಲ್ಲಿವೆ. ಒಂದು 'ಪತ್ರ' ಮತ್ತೊಂದು 'ಕಾಗದ'. ಕಾಗದ ಎಂದರೆ

'paper'ಎನ್ನುವ ಅರ್ಥವೂ ಇರುವುದರಿಂದ 'ಪತ್ರ' ಪದ ಆಡಳಿತದಲ್ಲಿ ಕರಪತ್ರ, ಸರ್ಕಾರೀ ಪತ್ರ, ಅನಾಮಧೇಯ ಪತ್ರ ಇತ್ಯಾದಿಯಾಗಿ ಬಳಕೆಗೊಂಡು ಸ್ಪಷ್ಟತೆ ಮತ್ತು ಪಾರದರ್ಶಕತೆಯನ್ನು ಒದಗಿಸುವ ಮೂಲಕ ಪಾರಿಭಾಷಿಕವಾಗಿ ಬಳಕೆಗೊಳ್ಳಲು ಅರ್ಹತೆಯನ್ನು ಸಂಪಾದಿಸುತ್ತದೆ. 'ಮಂತ್ರಿ' ಎನ್ನುವ ಪದವನ್ನು ಹಿಂದೆಹಾಕಿ ಆಡಳಿತದಲ್ಲಿ 'ಸಚಿವ'ಪದ ಮುನ್ನುಗ್ಗಿದ್ದು ಈ ಕಾರಣಗಳಿಗಾಗಿಯೇ.

ಆಡಳಿತದಲ್ಲಿ ಬಳಕೆಯಾಗುತ್ತಿರುವ ಕನ್ನಡ ಪದಗಳನ್ನು ಮೂರು ಬಗೆಯಾಗಿ ವಿಂಗಡಿಸಿ ಕೊಳ್ಳಬಹುದು.

೧.ದೇಶೀಪದಗಳು ೨. ಅನ್ಯದೇಶೀ ಅಥವಾ ಎರವಲು ಪದಗಳು ೩.ಟಂಕಿತ ಪದಗಳು

ಒತ್ತುವರಿ, ಸೋರಿಕೆ, ತಡೆ, ಕಾಯ್ದಿರಿಸು, ಹೊಣೆಗಾರಿಕೆ, ಕೆಲಸದ ವೇಳೆ, ಎಚ್ಚರಿಕೆ ಹಣ, ಬರೆವಣಿಗೆ ತಪ್ಪು, ಮುಂದುವರಿಕೆ ಹಾಳೆ, ಕಣ್ತಪ್ಪು, ಕೈತಪ್ಪು, ಕೈಹಣ, ತಿದ್ದುಪಡಿ-ಇತ್ಯಾದಿ ಅಚ್ಚಕನ್ನಡ ಪದಗಳು ಆಡಳಿತದಲ್ಲಿ ಬಳಕೆಯಾಗುತ್ತಿವೆ. ಇವುಗಳ ಜೊತೆಗೆ ಹೇರಳವಾಗಿ ಸಂಸ್ಕೃತದಿಂದ (ಅವಗಾಹನೆ, ತಿರಸ್ಕೃತ, ವಿತರಣೆ, ತನಿಖೆ, ಉಲ್ಲೇಖ, ವಿಚಾರಣೆ), ಉರ್ದು ಮತ್ತು ಪರ್ಶಿಯೋ ಅರಾಬಿಕ್ ಮೂಲದಿಂದ (ದಾವಾ, ಹಾಜರ್, ಮಂಜೂರು, ಬಾಕಿ, ರಹ, ಶರತ್ತು, ರವಾನೆ), ಇಂಗ್ಲಿಶ್ ಮತ್ತು ಇತರ ಪಾಶ್ಚಾತ್ಯ ಭಾಷಾಮೂಲದಿಂದ ಬಂದ (ಫೈಲು, ಅಪೀಲು, ಆರ್ಡರ್, ಗೆಜೆಟ್, ಲೈಸೆನ್ಸ್, ನಂಬರ್) ಮುಂತಾದ ಎರವಲು ಪದಗಳು ಕನ್ನಡ ಭಾಷೆಯಲ್ಲಿ ಆಡಳಿತವನ್ನು ಸಾಕಷ್ಟು ಸುಲಭಗೊಳಿಸಿವೆ. ಇವೆಲ್ಲ ಸಾಮಾನ್ಯ ರಿಗೂ ಚಿರಪರಿಚಿತವಾಗಿವೆ. ಇವುಗಳನ್ನು ಅನುವಾದಿಸುವುದು ವ್ಯರ್ಥಪ್ರಯತ್ನ.

ಎರವಲು ಪದಗಳನ್ನು ಕನ್ನಡದ ಜಾಯಮಾನಕ್ಕೆ ತಕ್ಕಂತೆ ಹೊಂದಿಸಿಕೊಂಡು, ಮಾರ್ಪ ಡಿಸಿ ಕೊಂಡು ಬಳಸುವುದು ರೂಢಿ. ಹೊಸಪದ ಸೃಷ್ಟಿ ಪ್ರಕ್ರಿಯೆಯಲ್ಲಿ ಇದನ್ನು ನಿಚ್ಚಳವಾಗಿ ಗಮನಿಸಬಹುದು. ಶಬ್ದಗಳನ್ನು ರೂಪಿಸುವ ಅನೇಕ ವಿಧಾನಗಳು ಕನ್ನಡದಲ್ಲಿವೆ. ಅವುಗಳಲ್ಲಿ ಮುಖ್ಯವಾದುವು ಸಮಾನವಿಧಾನ, (ಅಂಕಿತನಾಮ ಅಥವಾ ನಾಮಪದಗಳೊಂದಿಗೆ ಪ್ರತ್ಯಯ ಸೇರ್ಪಡೆ, ಉದಾ. ದಂಡಧಾರಿ, ಅನುಕಂಪಶೀಲ, ಸೇವಾನಿಷ್ಠ), ಪರಪ್ರತ್ಯಯ ವಿಧಾನ (ಸಂಖ್ಯಾತ್ಮಕ, ಸಂವಿಧಾನಾತ್ಮಕ, ಅರ್ಥವಿಲ್ಲದ, ತೀರಿಕೆ), ಪೂರ್ವಪ್ರತ್ಯಯ ವಿಧಾನ (ಅನ್ಯಾಯ, ಅತಿಕ್ರಮಣ, ಅವಗುಣ, ಉಪಯುಕ್ತ), ಮತ್ತು ಸಾದೃಶ್ಯಸೃಷ್ಟಿ ವಿಧಾನ (ಪೂರ್ಣ ವಿರಾಮ ರೂಪವನ್ನು ಅನುಸರಿಸಿ ಅಸ್ತ್ರವಿರಾಮ ರೂಪದ ಸೃಷ್ಟಿ).

ದಿನಬಳಕೆಯ ಸಾಮಾನ್ಯ ಪದಗಳಿಗೆ ಆಡಳಿತಭಾಷೆಯ ತಾಂತ್ರಿಕ ಶಕ್ತಿಯನ್ನು ತುಂಬು ವಂಥ ಕೆಲಸವೂ ನಡೆದಿದೆ. ಉದಾಹರಣೆಗೆ ಕೆಲಸ (work - duty), ಎಚ್ಚರಿಕೆ (care fullness - caution), ಒಪ್ಪೊತ್ತು (at onetime - part time), ಇಡುಗಂಟು (pres-ervation - lumpsum).

ಬೇರೆ ಬೇರೆ ಭಾಷೆಯ ಪದಗಳನ್ನು ಬೆಸೆದು ಸೃಷ್ಟಿಸಲಾದ ಹೊಸರೂಪಗಳು ಯಥೇಚ್ಛವಾಗಿ ಆಡಳಿತ ಪದಕೋಶದಲ್ಲಿ ದೊರೆಯುತ್ತವೆ. ಉದಾ: ಕೋಟಾವ್ರೋಚರ್, ಖಾಲಿಚೆಕ್ಕು (ಉರ್ದು+ಇಂಗ್ಲಿಶ್), ಬಾಂಡುಪತ್ರ, ಕಾಂಟ್ರ್ಯಾಕ್ಟು ಅವಧಿ (ಇಂಗ್ಲಿಶ್+ಸಂಸ್ಕೃತ) ಡಿಕ್ರಿಮೊತ್ತ (ಇಂಗ್ಲಿಶ್+ಕನ್ನಡ), ಮುಚ್ಚಿದ ಕಂಪನಿ (ಕನ್ನಡ+ಇಂಗ್ಲಿಶ್), ಪಾವತಿಪತ್ರ (ಮರಾಠಿ+ಸಂಸ್ಕೃತ).

ಡಾ. ಎಸ್. ಎನ್. ಶ್ರೀಧರ್ ಅವರು ತಮ್ಮ 'ಇಂದಿನ ಕನ್ನಡ : ರಚನೆ ಮತ್ತು ಬಳಕೆ' ಕೃತಿಯಲ್ಲಿ 'ಕನ್ನಡ ಭಾಷೆಯ ಆಧುನೀಕರಣ' ಕುರಿತಂತೆ ವಿಶ್ಲೇಷಿಸುತ್ತ ಈ ಬಗೆಯ ಹಲವಾರು ಪ್ರಕ್ರಿಯೆಗಳನ್ನು ಪರಿಚಯಿಸಿದ್ದಾರೆ. ಶಬ್ದಕೋಶದ ವಿಸ್ತರಣೆ, ದೇಶಿಯಲ್ಲದ ರಚನಾಕ್ರಮ ಪದ್ಧತಿಗಳ ಕ್ರಿಯಾತ್ಮಕ ಬಳಕೆ, ಕನ್ನಡಕ್ಕೆ ಇಂಗ್ಲಿಶ್ ರಚನಾಕ್ರಮದ ಮಾದರಿಯ ಅಳವಡಿಕೆ, ಮಿಶ್ರಭಾಷೆಯ ಬಳಕೆ, ಆಡುಮಾತಿಗೆ/ಸಂಭಾಷಣೆಗೆ ಬರವಣಿಗೆಯ ರೂಪ ಕೊಟ್ಟದ್ದು ಮತ್ತು ಪಾರಂಪರಿಕ ದ್ವಿಸ್ತರ(diglossia) ರೂಢಿಗಳನ್ನು ಮುರಿಯುವಿಕೆ ಮತ್ತು ಬಲಪಡಿಸುವಿಕೆ ಇತ್ಯಾದಿ ವಿಷಯಗಳು, ಕನ್ನಡ ಭಾಷಾಬಳಕೆಯ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ತುಂಬ ಮೌಲಿಕವಾಗಿವೆ.

ಅನುವಾದದ ಮೂಲಕ ಬೇಕಾದ ಪದಗಳನ್ನು ದಕ್ಕಿಸಿಕೊಳ್ಳುವುದು ಆಡಳಿತದಲ್ಲಿ ಸಾಮಾನ್ಯ ಸಂಗತಿ, ಆಡಳಿತ ಪದಕೋಶದಲ್ಲಿರುವ ಬಹುತೇಕ ಪದಗಳು ಅನುವಾದದಿಂದ ಲಭಿಸಿದಂತಹವಾಗಿವೆ. ಇಂಗ್ಲಿಶ್‌ನಿಂದ ಕನ್ನಡಕ್ಕೆ ಭಾಷಾಂತರಗೊಂಡು ಸಾರ (abstract), ಕಾಯ್ದೆ (act), ಆಯವ್ಯಯ (budget), ಸಂಹಿತೆ (code), ಸಾಕ್ಷಿ(evidence), ಇತ್ಯಾದಿ ಚಾಲನೆಯಲ್ಲಿವೆ. ಭಾಷಾಂತರದ ವೈಪರೀತ್ಯಗಳನ್ನು ತಪ್ಪಿಸಲು ಭಾರತದ ವೈಜ್ಞಾನಿಕ ಹಾಗೂ ತಾಂತ್ರಿಕ ಶಬ್ದಾವಳಿ ಆಯೋಗ ಕೆಲವು ಸೂಚನೆಗಳನ್ನು ನೀಡಿ ಮಾರ್ಗದರ್ಶನ ಮಾಡಿದೆ. ಅದರ ಪ್ರಕಾರ ತೂಕ ಮತ್ತು ಅಳತೆಯ ಮಾನಗಳನ್ನು (ಮೀಟರ್, ಲೀಟರ್, ಗ್ರಾಂ) ಭಾಷಾಂತರಿಸ ಕೂಡದು, ಜಾಗತಿಕ ಬಳಕೆಯ ಶಬ್ದಗಳನ್ನು ತರ್ಜುಮೆ ಮಾಡಬಾರದು (ಟಿ.ವಿ. ರೇಡಿಯೊ, ಪೆಟ್ರೋಲ್), ಎರವಲಿನ ನೆಲೆನಿಂತ ಪದಗಳನ್ನು (ಟಿಕೆಟ್, ಪೊಲೀಸ್, ಎಂಜಿನ್) ಅನುವಾದಿಸಬಾರದು. ಆದರೆ ಈ ಸೂಚನೆಗಳನ್ನು ನಾವು ಪಾಲಿಸದೇ ಹೋಗಿರುವುದು ಮೇಲ್ನೋಟಕ್ಕೇ ಸಾಬೀತಾಗುತ್ತದೆ.

ಧ್ವನ್ಯಾತ್ಮಕವಾಗಿ ಆಡಳಿತ ಭಾಷೆಯಲ್ಲಿನ ಉಚ್ಚಾರಣೆಯನ್ನು ಗಮನಿಸಿದರೆ ವಿದ್ಯಾವಂತರಲ್ಲಿ ಕೂಡ 'ಹ'ಕಾರ ಲೋಪ, (ಹಂತ-ಅಂತ), (ಹೊಂದಾಣಿಕೆ-ಒಂದಾಣಿಕೆ), ಊಷ್ಮ ಧ್ವನಿಗಳ ನಡುವೆ ವ್ಯತ್ಯಾಸ (ಷರತ್ತು-ಸರತ್ತು), (ಕೂಲಂಕಷ-ಕೂಲಂಕುಶ), ಮಹಾಪ್ರಾಣವ್ಯಂಜನ ಲೋಪ (ಧನ-ದನ), (ಅನುಭವ-ಅನುಬವ), ಅನಗತ್ಯ ಮಹಾಪ್ರಾಣ ಸೇರ್ಪಡೆ (ಹಾರ್ದಿಕ-ಹಾರ್ಧಿಕ), ಮುಂತಾಗಿ ಕಾಣಸಿಗುತ್ತವೆ. ದೂರದರ್ಶನ, ಸಿನೆಮಾ ಮತ್ತು ನಾಟಕ ಕಲಾವಿದರಲ್ಲಿ ಇಂಥ ಬಳಕೆ ಗೋಚರಿಸಿದಾಗ ಅವರು ಸಾರ್ವಜನಿಕರ ಟೀಕೆಗೆ ಗುರಿಯಾಗುವುದೂ ಉಂಟು.

ವ್ಯಾಕರಣ ಮತ್ತು ವಾಕ್ಯರಚನೆಗೆ ಸಂಬಂಧಪಟ್ಟಂತೆ ಕೂಡ ಆಡಳಿತ ಕನ್ನಡವನ್ನು ಪರಿಶೀಲಿಸ ಬಹುದು. ಆಕೃತಿಮಾತ್ಮಕವಾಗಿ ಸಂಸ್ಕೃತ ಮೂಲದ 'ಆ' ಕಾರಾಂತ ಎರವಲು ಪದಗಳು, ಕನ್ನಡದಲ್ಲಿ 'ಎ'ಕಾರಾಂತಕೊಳ್ಳುತ್ತವೆ. (ವಾರ್ತಾ-ವಾರ್ತೆ, ಭಾಷಾ-ಭಾಷೆ), ಆದರೆ ಅದೇ 'ಆ'ಕಾರಾಂತ ಪರ್ಶಿಯೋ ಅರಾಬಿಕ್ ಮೂಲದ ಪದಗಳಲ್ಲಿ ಕೆಲವು ಹಾಗೆಯೇ ಉಳಿಯುವುದು (ದಗಾ, ನಿಗಾ) ಕಂಡುಬರುತ್ತದೆ.

ಸಾಮಾನ್ಯವಾಗಿ ಕನ್ನಡದಲ್ಲಿ ಕ್ರಿಯಾಪದವನ್ನು ಸೃಷ್ಟಿಸುವ ಪ್ರತ್ಯಯ-ಇಸು, ಸಂಸ್ಕೃತ, ಉರ್ದು, (ಇಂಗ್ಲಿಶ್) ಪದಗಳಿಗೆ ಸುಲಭವಾಗಿ ಸೇರುತ್ತದೆ.

ಉದಾ : ಪೋಷಿಸು, ಪಾಲಿಸು, ಪ್ರಕಟಿಸು, ವಂದಿಸು (ಸಂಸ್ಕೃತ),

ರವಾನಿಸು, ಗುಜರಾಯಿಸು, ಗೆರಾಯಿಸು, ತರಾಯಿಸು (ಉರ್ದು)

ಟೈಪಿಸು, ಗೋಲಿಸು ಈ ಬಗೆಯ ಇಂಗ್ಲಿಶ್‌ನ ಕ್ರಿಯಾರೂಪಗಳು ಕಡಿಮೆ. ಬದಲಾಗಿ ಮಾಡು, ಆಗುವಿನ ಬಳಕೆ ಹೆಚ್ಚು : ಡಿಬಾರ್‌ಮಾಡು, ಕನೆಕ್ಟ್‌ಮಾಡು, ಪಾಸಾಗು ಫೇಲಾಗು ಇತ್ಯಾದಿ.

ಆಡಳಿತ ಕನ್ನಡದ ವಾಕ್ಯರಚನೆಯಲ್ಲಿ ಎದ್ದುಕಾಣುವ ಅಂಶ ಎಂದರೆ ಗ್ರಾಂಥಿಕ ಶೈಲಿ ಮತ್ತು ಅಸರಳ ರಚನೆ.

ಉದಾ : "ಸಾರ್ವಜನಿಕರ ಸಾಮಾನ್ಯ ಅವಗಾಹನೆಗಾಗಿ ಈ ಮೂಲಕ ಅಧಿಸೂಚಿಸುವುದೇನೆಂದರೆ ಧಾರವಾಡ ವಿಭಾಗದ ಸರ್ವೆನಂಬರುಗಳಲ್ಲಿಯ ಮರಗಳ ಮರಾಟಕ್ಕಾಗಿ ದರಕಾಸ್ತುಗಳನ್ನು ಧಾರವಾಡದಲ್ಲಿ ದಿನಾಂಕ ೨೮ನೇ ಜನವರಿ ೧೯೬೯ರಂದು ಈ ಮುಂದೆ ತೋರಿಸಿದಂತೆ ಸ್ವೀಕರಿಸಲಾಗುವುದು."

ಕ್ರಿಯಾಪದರಹಿತವಾದ ವಾಕ್ಯರಚನೆ ಕನ್ನಡ ಭಾಷೆಯ ವೈಶಿಷ್ಟ್ಯಗಳಲ್ಲೊಂದು. ಆದರೆ ಇಂಗ್ಲಿಶ್ ಅನುಕರಣೆಯಿಂದ ಕ್ರಿಯಪದ ಸಹಿತ ರಚನೆ ಆಡಳಿತ ಕನ್ನಡದಲ್ಲಿ ಕಂಡುಬರುವುದುಂಟು.

ಉದಾ : ಹನುಮಂತರಾಯ ತುಂಬ ಒಳ್ಳೆಯ ಅಧಿಕಾರಿಯಾಗಿದ್ದಾರೆ. 'ಹನುಮಂತರಾಯ ತುಂಬ ಒಳ್ಳೆಯ ಅಧಿಕಾರಿ' ಎಂದರೆ ಅದೇ ಅರ್ಥಸ್ಫುರಿಸುವುದಿಲ್ಲವೆ? 'ಇದು ಅವರ ಅಭ್ಯಾಸವಾಗಿದೆ' ಎನ್ನುವುದರ ಬದಲು 'ಇದು ಅವರ ಅಭ್ಯಾಸ' ಎಂದರಷ್ಟೇ ಸಾಲದೆ.

'ನಿಮ್ಮ ಪತ್ರದ ಕ್ರಮಾಂಕ ... ದಿನಾಂಕ ... ಒಕ್ಕಣೆ ಮೇರೆಗೆ ನಾನು ತಿಳಿಸ ಬಯಸುವುದೇನೆಂದರೆ' ಇಂಥ ವಾಕ್ಯರಚನೆ ಕೃತಕ ಎನಿಸುವುದಿಲ್ಲವೆ.?

ಆಡುಭಾಷೆಯಲ್ಲಿ ಬಳಕೆಯಲ್ಲೇ ಇಲ್ಲದ ಕರ್ಮಣಿ ಪ್ರಯೋಗ ಆಡಳಿತ ಕನ್ನಡದಲ್ಲಿ ಕಾವು ಪಡೆದಿದೆ.

ಉದಾ : ರಾಮನಿಂದ ವಂಚಿಸಲ್ಪಟ್ಟ, ಕ್ಯಾತ ಪೊಲೀಸರಿಗೆ ದೂರು ಕೊಟ್ಟಿದ್ದಾನೆ. ಆಡಳಿತ ಭಾಷೆಯ ವಾಕ್ಯರಚನೆಯಲ್ಲಿ ಎಂಟು ಬಗೆಯ ದೋಷಗಳನ್ನು ಗುರುತಿಸಲಾಗಿದೆ. ಅವು ಯಾವುವೆಂದರೆ.

೧. ಕೃತಕತೆ, ೨. ಅಸ್ಪಷ್ಟತೆ, ೩. ಅಪಾರ್ಥ, ೪. ಅರ್ಥರಹಿತತೆ, ೫. ಗೊಂದಲಮಯತೆ

ಉದಾ : ರಾಮನಿಂದ ವಂಚಿಸಲ್ಪಟ್ಟ, ಕ್ಯಾತ ಪೊಲೀಸರಿಗೆ ದೂರು ಕೊಟ್ಟಿದ್ದಾನೆ. ಆಡಳಿತ ಭಾಷೆಯ ವಾಕ್ಯರಚನೆಯಲ್ಲಿ ಎಂಟು ಬಗೆಯ ದೋಷಗಳನ್ನು ಗುರುತಿಸಲಾಗಿದೆ. ಅವು ಯಾವುವೆಂದರೆ.

೧.ಕೃತಕತೆ, ೨.ಅಸ್ಪಷ್ಟತೆ, ೩.ಅಪಾರ್ಥ, ೪.ಅರ್ಥರಹಿತತೆ, ೫.ಗೊಂದಲಮಯತೆ ೬.ಸುತ್ತುಬಳಸಿಕೆ ೭. ದಾಸ್ಯಮನೋಧರ್ಮ ಮತ್ತು ೮. ವ್ಯಾಕರಣ ಹಾಗೂ ಕಾಗುಣಿತ ದೋಷಗಳು. ಈ ಅಷ್ಟಗ್ರಹಗಳ ಕಾಟದಿಂದ ಮುಕ್ತವಾದ ಕನ್ನಡ ಬಳಕೆ ಆಡಳಿತಕ್ಕೆ ಅಪೇಕ್ಷಣೀಯ.

**೪. ಜಾಗ್ರತಿ ಕಹಳೆ :** "ಕನ್ನಡವನ್ನು ಎಲ್ಲ ವಲಯಗಳಲ್ಲೂ ಬಳಸುವುದು ಎಂದರೆ ವಾಸ್ತವವಾಗಿ ಈಗ ಬಳಕೆಯಲ್ಲಿರುವ ಇಂಗ್ಲಿಶ್‌ನ ಬಳಕೆಯನ್ನು ಕಡಿಮೆ ಮಾಡುವುದು; ಕೊನೆಗೆ ನಿಲ್ಲಿಸುವುದು ಎಂದರ್ಥ" ಎನ್ನುತ್ತಾರೆ ಡಾ. ಕೆ. ವಿ.ನಾರಾಯಣ. ಇಂಗ್ಲಿಶ್ ಬಳಕೆಯನ್ನು ನಿಲ್ಲಿಸುವುದರ ಬದಲು ಇವರು ಕಂಗ್ಲಿಶ್‌ನ್ನು (ಕನ್ನಡಿಗರ ಇಂಗ್ಲಿಶ್) ರೂಪಿಸಿಕೊಳ್ಳಬೇಕಾದ ಅಗತ್ಯವನ್ನು ಪ್ರತಿಪಾದಿಸಿದ್ದಾರೆ. ಹಾಗೆ ರೂಪಿಸಿಕೊಳ್ಳಬಹುದಾದ ಮಾರ್ಗೋಪಾಯವನ್ನು ಸೂಚಿಸಿದ್ದಾರೆ. ಇಂಗ್ಲಿಶ್‌ನ್ನು ಕನ್ನಡ ಲಿಪಿಯಲ್ಲಿ ಬರೆಯುವುದು ಸಾಧುವೆ? ಅಸಾಧುವೆ? ಈ ನಿಟ್ಟಿನಲ್ಲಿ ಇನ್ನೂ ಪ್ರತಿಕ್ರಿಯೆ ವ್ಯಕ್ತವಾಗಬೇಕಾಗಿದೆ. ಇದು ಸಾಧ್ಯವಾಗುವುದಾದರೆ ಅದು ಕಲಿಕೆಗೆ ಮಾತ್ರವಲ್ಲ ಆಡಳಿತಕ್ಕೂ ಅನುಕೂಲ ತಂದೀತು.

ಕನ್ನಡಿಗರ ಅಭಿಮಾನ ಹೇಗೇ ಇರಲಿ, ಅಧಿಕಾರಿಗಳ ಮರ್ಜಿ ಏನೇ ಇರಲಿ, ಸರ್ಕಾರದ ಅವಜ್ಞೆ ಎಂತೇ ಇರಲಿ, ಕನ್ನಡದ ಜಾಗೃತಿ ಕಹಳೆಯನ್ನು ಉದ್ದಕ್ಕೂ ಸಾಹಿತಿಗಳು ಹೀಗೆ ಊದುತ್ತಲೇ ಬಂದಿದ್ದಾರೆ. ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳು, ಕನ್ನಡಪರವಾದ ಸಂಘ ಸಂಸ್ಥೆಗಳು, ಚಳುವಳಿಗಾರರು ತಮ್ಮಿಂದಾದ ಸಹಕಾರವನ್ನು ಕೊಡುತ್ತಲೇ ಬಂದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಂಸ್ಕೃತಿ ಇಲಾಖೆ, ಸಾಹಿತ್ಯ ಅಕಾಡೆಮಿ, ಕನ್ನಡ ಪ್ರಾಧಿಕಾರ ಇವೆಲ್ಲ ಕನ್ನಡ ಕಾಯಕಕ್ಕೆ ಕಂಕಣ ಕಟ್ಟಿ ದುಡಿಯುತ್ತಿವೆ. ಈ ಪಟ್ಟಿಗೆ ಮಹತ್ವದ್ದಾಗಿ ಕನ್ನಡ ವಿಶ್ವವಿದ್ಯಾಲಯ ಸೇರ್ಪಡೆಯಾಗಿದೆ. ಕನ್ನಡದ ಸರ್ವಾಂಗೀಣ ಪ್ರಗತಿಗಾಗಿ ಅದು ಇಡುತ್ತಿರುವ ಹೆಜ್ಜೆಗಳು ಭರವಸೆ ಹುಟ್ಟಿಸುತ್ತಿವೆ. ಕನ್ನಡದ ಈವರೆಗಿನ ಸಾಧನೆ, ಸಿದ್ಧಿಗಳನ್ನು ನಾವೆಲ್ಲ ಬಲ್ಲವರಾಗಿದ್ದೇವೆ. ಅದರ ಮುನ್ನೋಟಕ್ಕಾಗಿ ಹಂಪಿಯ ಈ ವಿಶ್ವವಿದ್ಯಾಲಯದ ಕಡೆಗೆ ಮುಖ ಮಾಡಿದ್ದೇವೆ. ಕಲ್ಬುರ್ಗಿ ಅವರ ಕನ್ನಡದ ಶಕ್ತಿ, ನಾರಾಯಣರ 'ಕಂಗ್ಲೀಶ್' ಮತ್ತು ಈ ಬಗೆಯ ಚಿಂತನೆ ಹೊಸಬೆಳಕು ಚೆಲ್ಲೀತೆ? ಕಾದು ನೋಡುವ.

## ಪರಾಮರ್ಶನ ಗ್ರಂಥಗಳು

೧. ಡಾ. ಎಸ್.ಎನ್. ಶ್ರೀಧರ್, 'ಇಂದಿನ ಕನ್ನಡ ರಚನೆ ಮತ್ತು ಬಳಕೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೫.

೨. ಡಾ. ಹಾ. ಮಾ. ನಾಯಕ, 'ಕನ್ನಡವನ್ನು ಕಟ್ಟುವ ಕೆಲಸ', ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೮೭.

೩. ಎಲ್.ಎಸ್. ಶೇಷಗಿರಿರಾವ್ (ಪ್ರ.ಸಂ.), 'ಕನ್ನಡದ ಅಳಿವು ಉಳಿವು', ಕನ್ನಡ ಭಾಷಾ ಅಭಿವೃದ್ಧಿಯ ಸಮೀಕ್ಷಾ ವಿಜಯನಗರ, ಬೆಂಗಳೂರು, ೧೯೮೫.

೪. ಟಿ.ಎಸ್. ಛಾಯಾಪತಿ, 'ಆಡಳಿತ ಭಾಷೆ ಕನ್ನಡ', ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೬.

೫. ಎನ್.ಎಸ್. ರಾಮಪ್ರಸಾದ (ಸಂ), 'ವಿಶ್ವಕನ್ನಡ' ಸಂ ೧,೨,೪, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೬.

೬. ಎಚ್.ಎಸ್. ರಾಘವೇಂದ್ರರಾವ್ (ಸಂ), 'ಕನ್ನಡ ಅಧ್ಯಯನ', ಸಂ. ೨ ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ಹಂಪಿ, ೧೯೯೪.

೭. ಎಲ್.ಎಸ್. ಶೇಷಗಿರಿರಾವ್ (ಸಂ) , 'ಕನ್ನಡ ಕನ್ನಡಿಗ ಕರ್ನಾಟಕ' ಕನ್ನಡ ಶಕ್ತಿಕೇಂದ್ರ, ಬೆಂಗಳೂರು, ೧೯೯೦.

೮. ಡಾ.ಹಾ.ಮಾ. ನಾಯಕ (ಪ್ರ.ಸಂ.), 'ವಿಜ್ಞಾನ ಸಾಹಿತ್ಯ ನಿರ್ಮಾಣ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿಶ್ವವಿದ್ಯಾನಿಲಯ, ೧೯೭೧.

೯. ಡಾ.ಹಾ.ಮಾ. ನಾಯಕ (ಪ್ರ.ಸಂ), 'ಶಾಸ್ತ್ರ ಸಾಹಿತ್ಯ ನಿರ್ಮಾಣ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿ.ವಿ. ೧೯೭೫.

೧೦. ಡಾ.ಎಂ.ಎನ್.ವಿ. ಪಂಡಿತಾರಾಧ್ಯ, 'ಕನ್ನಡ ಅಂಕಿಗಳನ್ನೇ ಬಳಸಿ' ಪ್ರಬೋಧ ಪುಸ್ತಕಮಾಲೆ, ಮೈಸೂರು. ೧೯೯೨.

೧೧. ಡಾ. ಮಳಲಿ ವಸಂತಕುಮಾರ್, ಡಾ.ಕೆ. ಭೈರವಮೂರ್ತಿ (ಸಂ), 'ನಮ್ಮ ಕನ್ನಡ', ಶ್ರೀ ನ. ನಾಗಲಿಂಗಸ್ವಾಮಿ ಅಭಿನಂದನ ಸಮಿತಿ, ಮೈಸೂರು. ೧೯೯೧.

೧೨. ಜಯತೀರ್ಥ ರಾಜಪುರೋಹಿತ, 'ಕನ್ನಡ ತೀರ್ಪುಗಳು' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೧೯೭೭.

೧೩. ಪ್ರಧಾನ್‌ಗುರುದತ್ತ, 'ಆಡಳಿತ ಭಾಷೆ ಕೆಲವು ವಿಚಾರಗಳು', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿ.ವಿ. ೧೯೮೪.

೧೪. ಕಂಠೀರಾವ್, 'ಭಾರತೀಯ ನ್ಯಾಯಪದ್ಧತಿ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿ.ವಿ. ೧೯೮೫.

೧೫. ಡಾ.ಹಾ.ಮಾ. ನಾಯಕ, 'ಕಛೇರಿ ಕೈಪಿಡಿ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೧೯೭೮.

೧೬. ಡಾ.ಕೆ.ವಿ. ನಾರಾಯಣ (ಸಂ), 'ನಮ್ಮ ಕನ್ನಡ', ಸಂಚಿಕೆ ೩೨. ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೮.

೧೭. ಡಾ. ಸೋಮಶೇಖರಗೌಡ, 'Kannada in Law and administration' Project, Report (unpublished) C.I.I.L, Mysore- 1981.

# ಕನ್ನಡದ ಉಪಭಾಷೆಗಳು ಹಾಗೂ ಭಾಷಾಭಿವೃದ್ಧಿ

ಡಾ.ಕೃಷ್ಣಪರಮೇಶ್ವರ ಭಟ್ಟ

## ಹಿನ್ನೆಲೆ

ಉಪಭಾಷಾಧ್ಯಯನಗಳನ್ನು ಕುರಿತು ನಡೆದ ಎರಡು ರೀತಿ ಪ್ರಯತ್ನಗಳಲ್ಲಿ ಒಂದು, ಪ್ರಾದೇಶಿಕ ಭಾಷಾಪ್ರಭೇದಗಳ ಶಬ್ದಸಂಗ್ರಹಣ ಮಾಡುವುದನ್ನು ಕುರಿತದ್ದು, ಇನ್ನೊಂದು, ಪ್ರಭೇದಗಳನ್ನು ಕುರಿತ ವ್ಯಾಕರಣಗಳನ್ನು ಸಿದ್ಧಪಡಿಸುವುದನ್ನು ಕುರಿತದ್ದು. ಇವುಗಳಲ್ಲಿ ಮೊದಲನೆಯ ಬಗೆಯ ಪ್ರಯತ್ನ ಈ ಶತಮಾನಕ್ಕೆ ಪೂರ್ವದಲ್ಲಿ ವಿರಳವಾಗಿಯಾದರೂ ಕಾಣಿಸಿಕೊಂಡಿದ್ದು, ಈ ಶತಕದ ಮಧ್ಯಭಾಗದಿಂದ ಈಚೆಗೆ ದೊಡ್ಡಪ್ರಮಾಣದಲ್ಲಿ, ಹೆಚ್ಚು ವ್ಯವಸ್ಥಿತವಾದ ರೀತಿಯಲ್ಲಿ, ವಿವಿಧ ಉದ್ದೇಶಗಳೊಂದಿಗೆ ನಡೆದಿದೆ. ಸಾಮಾಜಿಕ ಹಿನ್ನೆಲೆ ಹಾಗೂ ಸಂಖ್ಯಾಪ್ರಮಾಣಗಳ ಹಿನ್ನೆಲೆಯಲ್ಲಿ ನಡೆದ ಸರ್ವೇಕ್ಷಣೆಗಳು ಉಪಭಾಷಾ ಅಧ್ಯಯನಕ್ಕೆ ಈಚಿನ ಹೊಸ ಸೇರ್ಪಡೆಗಳು. ಮಾಹಿತಿ ಸಂಗ್ರಹಣದ ರೀತಿಗಳು ಬದಲಾಗಿವೆ. ಆಯ್ದ ಕೆಲವೇ ವ್ಯಕ್ತಿಗಳಿಂದ, ಕೆಲವೊಮ್ಮೆ ಪರೋಕ್ಷವಾಗಿ, ಸಂಗ್ರಹಿಸುವ ಹಿಂದಿನ ರೀತಿಗೆ ಬದಲಾಗಿ ಸಮಾಜದ ಎಲ್ಲ ವರ್ಗಗಳನ್ನು ಪ್ರತಿನಿಧಿಸುವ ರೀತಿಯಲ್ಲಿ ಹೆಚ್ಚು ಜನರನ್ನು ಒಳಗೊಳ್ಳುವಂತೆ ಸರ್ವೇಕ್ಷಣೆಗಳು ನಡೆದಿವೆ. ಮಾಹಿತಿಗಳನ್ನು ಸೂಕ್ಷ್ಮವ್ಯತ್ಯಾಸಗಳೊಂದಿಗೆ ದಾಖಲಿಸಿಕೊಳ್ಳುವಲ್ಲಿ ಹಾಗೂ ಅದನ್ನು ವಿಶ್ಲೇಷಣೆಗಳಿಗೆ ಒಳಪಡಿಸುವಲ್ಲಿ ತಾಂತ್ರಿಕ ಉಪಕರಣಗಳೂ ಸಹಾಯಕಾರಿ ಯಾಗಿವೆ. ಶಬ್ದಸಂಗ್ರಹಣವನ್ನಾಧರಿಸಿದ ಅಧ್ಯಯನಗಳ (ಪ್ರಾರಂಭದ ಘಟ್ಟದಲ್ಲಿ ವಿಶೇಷವಾಗಿ ಇದ್ದ) ಒಂದು ಮುಖ್ಯವಾದ ಉದ್ದೇಶ ಭಾಷೆಯೊಂದರ ಪ್ರಾಚೀನವಾದ ರೂಪಗಳು ಪಳೆಯುಳಿಕೆಗಳಾಗಿ ದೊರೆಯಬಲ್ಲವು ಹಾಗೂ ಇವುಗಳನ್ನು ಗುರುತಿಸುವುದರ ಮೂಲಕ ಭಾಷೆಯ ಹಿಂದಿನ ಅವಸ್ಥೆಗಳ ಪುನಾರಚನೆಯನ್ನು ಮಾಡಬಹುದೆಂಬುದು (ಕಾಲಕ್ರಮದಲ್ಲಿ ಕಳೆದು ಹೋಗಬಹುದಾದ ಇಂತಹ ರೂಪಗಳನ್ನು ಸಂಗ್ರಹಿಸುವ ಉದ್ದೇಶ ಆ ಕಾಲದಲ್ಲಿ ಜಾನಪದ ಕ್ಷೇತ್ರದಲ್ಲಿ ನಡೆದ ಸಂರಕ್ಷಣೆಯ ಪ್ರಯತ್ನ, ದೃಷ್ಟಿಕೋನಗಳಿಗೆ ಸಂವಾದಿಯಾದದ್ದು). ಇನ್ನೊಂದು ಉದ್ದೇಶ-ಭಾಷಾರೂಪಗಳ (ಮುಖ್ಯವಾಗಿ ಶಬ್ದಗಳ) ಭೌಗೋಲಿಕ ವ್ಯಾಪ್ತಿ ಹಾಗೂ ಪ್ರಸರಣದ ದಿಕ್ಕುಗಳನ್ನು ಕಂಡುಕೊಳ್ಳುವುದು ಹಾಗೂ ಆ ಮೂಲಕ ವ್ಯಾಪಾರ-ವಾಣಿಜ್ಯ ಮುಂತಾದ ಭಾಷೇತರವಾದ ಸಂಪರ್ಕಗಳ ವಿಷಯವಾಗಿ ಐತಿಹಾಸಿಕ ಮಾಹಿತಿಗಳನ್ನು ಹೊರತೆಗೆಯುವುದು.

ಮೇಲೆ ಹೇಳಿದ ಎರಡನೆಯ ಬಗೆಯ ಪ್ರಯತ್ನ ಈ ಶತಮಾನದ ಮೂರು-ನಾಲ್ಕನೇ ದಶಕಗಳಿಂದೀಚಿಗೆ ನಡೆದದ್ದು. ಇದು ಭಾಷೆಗಳನ್ನು ಕುರಿತು ಆಧುನಿಕ ವರ್ಣನಾತ್ಮಕ ಅಧ್ಯಯನದ ವಿಧಾನ ರೂಪಿತವಾದದ್ದರ ಫಲವಾಗಿ ಕಾಣಿಸಿಕೊಂಡದ್ದು. ಲಿಖಿತ ರೂಪಕ್ಕಿಂತ ಆಡುಮಾತಿನ ರೂಪ ಭಾಷೆಯ ವರ್ತಮಾನ ಸ್ಥಿತಿಯನ್ನು ಹೆಚ್ಚು ಚೆನ್ನಾಗಿ ಪ್ರತಿಫಲಿಸುತ್ತದೆ ಹಾಗೂ ಆ ಕಾರಣದಿಂದ ಆಡುಮಾತಿನ ವಿಶ್ಲೇಷಣೆಯನ್ನು ಮಹತ್ವದಾಗಿ ಪರಿಗಣಿಸತಕ್ಕದ್ದು ಎಂಬ ಧೋರಣೆ ಉಂಟಾದದ್ದು ಈ ಸಂದರ್ಭದಲ್ಲಾದ ಒಂದು ಮುಖ್ಯ ತಿರುವು. ಇದರ ಜೊತೆಗೆ ಬುಡಕಟ್ಟು ಜನಾಂಗಗಳ ಸಂಸ್ಕೃತಿಯ ಅಧ್ಯಯನಕ್ಕೆ ಅವರ ಭಾಷೆಗಳ ಪರಿಚಯ ಹಾಗೂ ಅವುಗಳ ರಚನೆಯನ್ನು ಕುರಿತ ತಿಳುವಳಿಕೆ ತೀರ ಅಗತ್ಯವೆಂಬರಿವಿನೊಂದಿಗೆ ಅಮೇರಿಕದ ವಿದ್ವಾಂಸರು ಆಡುಭಾಷೆಗಳನ್ನು ಕುರಿತ ವ್ಯಾಕರಣಗಳನ್ನು ಸಿದ್ಧಪಡಿಸುವಂತಾದುದು ಇನ್ನೊಂದು ಬೆಳವಣಿಗೆ. ಆಡುಮಾತುಗಳನ್ನು ಕುರಿತು ವಿಶ್ಲೇಷಣೆಯ ವಿಧಾನವೂ ರೂಪಿತವಾಗಿ ಅಧ್ಯಯನಗಳು ಪ್ರಾರಂಭಗೊಂಡಂತೆ ಭಾಷೆಯೆಂಬುದು ಏಕರೂಪವಾದದ್ದಾಗಿರದೇ ಬಹುರೂಪಿ ಯಾದದ್ದು ಎಂಬ ತಿಳುವಳಿಕೆ ಮೂಡಿದ್ದು ಅದು ಉಪ ಭಾಷೆಗಳ ಅಧ್ಯಯನಕ್ಕೆ ಪ್ರಚೋದನೆ ಯಾಯಿತು; ಉಪಭಾಷೆಗಳನ್ನು ಕುರಿತು ಪೂರ್ಣ ಪ್ರಮಾಣದ ವ್ಯಾಕರಣಗಳ ರಚನೆಗಳಿಗೆ ಕಾರಣವಾಯಿತು.

### ಸಾಧನೆ

ಆಧುನಿಕ ಅಧ್ಯಯನದ ವಿಧಾನಗಳ ಪರಿಚಯದ ಫಲವಾಗಿ ಭಾರತೀಯ ಭಾಷೆಗಳನ್ನು, ಅಂತೆಯೇ ಕನ್ನಡವನ್ನು ಆಡುಮಾತಿನ ನೆಲೆಯಲ್ಲಿ ಅದರ ಶಿಷ್ಟ ಹಾಗೂ ಉಪಭಾಷೆಗಳನ್ನು ಅಧ್ಯಯನ ಮಾಡುವ ಪ್ರಯತ್ನಗಳು ಕಳೆದ ಸುಮಾರು ಐವತ್ತು ವರ್ಷಗಳಿಂದ ಈಚೆಗೆ ನಡೆಯುತ್ತಿವೆ. ಇಂತಹ ಪ್ರಯತ್ನಗಳ ಫಲವಾಗಿ ಕನ್ನಡದ ಉಪಭಾಷೆಗಳನ್ನು ಕುರಿತಂತೆ ಪುಣೆಯ ಡೆಕ್ಕನ್ ಕಾಲೇಜಿನಿಂದ ಹಲವಾರು ಪ್ರಕಟನೆಗಳು ಹೊರಬಂದಿವೆ. ಇವುಗಳಲ್ಲಿ ಕೆಲವು ಕನ್ನಡದ ಪ್ರಾದೇಶಿಕ ಪ್ರಭೇದಗಳನ್ನು ಕುರಿತಾಗಿವೆ. (ಉದಾ : 'ತಿಪಟೂರು ಕನ್ನಡ', 'ಬಾರಕೂರು ಕನ್ನಡ', 'ಗುಲಬರ್ಗಾ ಕನ್ನಡ') ಇನ್ನು ಕೆಲವು ಸಾಮಾಜಿಕ ಪ್ರಭೇದಗಳನ್ನು ಕುರಿತಾಗಿವೆ. (ಉದಾ: 'ಹವ್ಯಕ ಕನ್ನಡ', 'ಹಾಲಕ್ಕಿ ಕನ್ನಡ'). ಇವೆಲ್ಲವೂ ಆಯಾ ಪ್ರಭೇದವನ್ನು ಕುರಿತ ಸಂಕ್ಷಿಪ್ತ ವರ್ಣನಾತ್ಮಕ ವ್ಯಾಕರಣಗಳಾಗಿವೆ. ಜೊತೆಗೆ ಅವುಗಳಲ್ಲಿಯ ವಿಶ್ಲೇಷಣೆಗಳನ್ನು ಸಮರ್ಥಿಸುವಂತಹ ಆಯ್ದ ಶಬ್ದಗಳ ಪಟ್ಟಿಯನ್ನು ಒಳಗೊಳ್ಳುತ್ತವೆ. ಈ ಪ್ರಭೇದಗಳ ಆಯ್ಕೆಯ ಹಿಂದಿನ ತತ್ವವೇನು ಎಂಬುದನ್ನು ಯಾವುದೇ ಕೃತಿಯಲ್ಲಿಯೂ ಹೇಳಲಾಗಿಲ್ಲ. (ಈ ಮಾಲಿಕೆಯ ಪ್ರಕಟನೆಗಳು ಯಾವುದೇ ಮುನ್ನುಡಿಯನ್ನು ಹೊಂದಿಲ್ಲ.) ಆದರೆ ಇಲ್ಲಿಯ ಶೀರ್ಷಿಕೆಗಳನ್ನು ಗಮನಿಸಿದಲ್ಲಿ ಪ್ರಾದೇಶಿಕ ಪ್ರಭೇದಗಳ ವ್ಯಾಕರಣವೆಂದು (ಮೇಲ್ನೋಟಕ್ಕೆ) ತೋರುವ ವ್ಯಾಕರಣಗಳು ಕರ್ನಾಟಕದಲ್ಲಿಯ ಭೌಗೋಲಿಕ ದೂರವುಳ್ಳ ಮೂರು-ನಾಲ್ಕು ಪ್ರದೇಶಗಳನ್ನು (ಕರಾವಳಿ-ಹಳೆಯ ಮೈಸೂರು-ಉತ್ತರ ಕರ್ನಾಟಕ) ಗಮನ

ದಲ್ಲಿರಿಸಿಕೊಂಡು ಅವುಗಳನ್ನು ಪ್ರತಿನಿಧಿಸುವಂತೆ ಬಾರಕೂರು, ತಿಪಟೂರು, ಗುಲಬರ್ಗಾ ಎಂಬ ಪ್ರದೇಶಗಳನ್ನು ಆಯ್ದುಕೊಂಡಂತೆ ತೋರುತ್ತದೆ. ಈ ವ್ಯಾಕರಣಗಳು ಪ್ರಾದೇಶಿಕ ವೈವಿಧ್ಯವನ್ನು ಪರಿಚಯಿಸುವಂತೆ ತೋರಿದರೂ ವಾಸ್ತವದಲ್ಲಿ ಅವು ಆಯಾ ಪ್ರದೇಶಗಳ ಲ್ಲಿಯ ಬಹುಜನ ಸಮಾಜವೊಂದರ ಭಾಷೆಯನ್ನು ಮಾತ್ರ ಆಧರಿಸಿವೆ. ಇದು ಹೀಗಾಗಿರು ವುದು ಈ ಬಗೆಯ ಅಧ್ಯಯನ ವಿಧಾನವೊಂದರ (ಅದರಲ್ಲಿಯೂ ಭಾರತೀಯ ಪರಿಸರ ದಲ್ಲಿ) ಮಿತಿಯೂ ಹೌದು. ಇದಲ್ಲದೇ, ಭಾಷೆ ಹಳ್ಳಿಗಳಲ್ಲಿ ಹಾಗೂ ಏಕಭಾಷಿಕರಲ್ಲಿ ಏಕರೂಪವಾಗಿರುತ್ತದೆ ಎಂಬ ಆ ಕಾಲದಲ್ಲಿ ಪ್ರಚಲಿತವಾಗಿದ್ದ ದೃಷ್ಟಿಕೋನ ಹಿನ್ನೆಲೆಯಲ್ಲಿ ರಚಿತವಾದ ಈ ಕೃತಿಗಳು ಬಹುಭಾಷಿಕರ ಹಾಗೂ ನಗರದ ಪರಿಸರಗಳಲ್ಲಿಯ ಕನ್ನಡದ ವೈವಿಧ್ಯಗಳನ್ನು ಒಳಗೊಳ್ಳುವಂತಾಗಲಿಲ್ಲ. ನಿರ್ದಿಷ್ಟ ಸಮಾಜದ ಹಾಗೂ ನಿರ್ದಿಷ್ಟವಯೋ ಮಾನದ ಕೆಲವೇ ವ್ಯಕ್ತಿಗಳಿಂದ, ಬಹುಮಟ್ಟಿಗೆ ಔಪಚಾರಿಕವಾದ ರೀತಿಗಳಲ್ಲಿ ಪಡೆದ ಮಾಹಿತಿ ಗಳನ್ನಾಧರಿಸಿ ಸಿದ್ಧವಾದ ಕೃತಿಗಳಿವು. ವಿಲಿಯಂ ಬ್ರೈಟ್ ಅವರ 'An outline of colloquial kannada'ಎಂಬ ಕೃತಿ ಹಳೆಯ ಮೈಸೂರು ಪ್ರದೇಶದ ಕನ್ನಡವನ್ನು ಪರಿ ಚಯಿಸುವಂಥದು, ಇದಕ್ಕೆ ಆಕರವಾದ ಭಾಷಾಸಾಮಗ್ರಿ ವಿದ್ವಾಂಸರಿಂದ, ಔಪಚಾರಿಕ ರೂಪದಲ್ಲಿ ಪಡೆದದ್ದು. ಆದ್ದರಿಂದ ಇದು ಶಿಷ್ಟಭಾಷೆಯನ್ನು ವರ್ಣಿಸುವಂಥಾದ್ದಾಗಿದೆ.

ಇದೇ ಮಾದರಿಯಲ್ಲಿ ಈ ಪ್ರಯತ್ನಗಳ ಮುಂದುವರಿಕೆಯೆಂಬಂತೆ ಕನ್ನಡದ ವಿಭಿನ್ನ ಪ್ರಾದೇಶಿಕ/ಸಾಮಾಜಿಕ ಪ್ರಭೇದಗಳನ್ನು ಕುರಿತ ವರ್ಣನಾತ್ಮಕ ಪ್ರಬಂಧಗಳು ಪಿ.ಎಚ್.ಡಿ. ಪದವಿಯ ಅಂಗವಾಗಿ ರಚಿತವಾಗಿ ಪ್ರಕಟಿತ/ಅಪ್ರಕಟಿತ ರೂಪದಲ್ಲಿವೆ. 'ದೀವರ ಕನ್ನಡ' 'ಕುರುಂಬ ಕನ್ನಡ', 'ಸೋಲಿಗರ ಕನ್ನಡ', 'ಉತ್ತರ ಕನ್ನಡದ ಹವ್ಯಕರ ಕನ್ನಡ', 'ದಕ್ಷಿಣ ಕನ್ನಡದ ಹವ್ಯಕರ ಕನ್ನಡ', 'ಕಲಬುರ್ಗಿ ಕನ್ನಡ' 'ಕನ್ನಡದ ನಾಲ್ಕು ಉಪಭಾಷೆಗಳ ತೌಲನಿಕ ಅಧ್ಯಯನ' ಮುಂತಾದ ಕೃತಿಗಳು ರಚಿತವಾಗಿವೆ. ಇವೆಲ್ಲವೂ ವರ್ಣನಾತ್ಮಕ ಭಾಷಾ ವಿಜ್ಞಾನದ ಮಾದರಿಯಲ್ಲಿ ಮೇಲೆ ಹೇಳಿದ ಡೆಕ್ಕನ್ ಕಾಲೇಜ್ ಪ್ರಕಟನೆಗಳ ರೀತಿಯಲ್ಲಿಯೇ ಆದರೆ ಹೆಚ್ಚು ವಿಸ್ತೃತವಾದ ರೂಪದಲ್ಲಿ ಅಧಿಕಮಾಹಿತಿ ಪ್ರಮಾಣಗಳೊಂದಿಗೆ ರಚಿತವಾಗಿವೆ. ಗುಣಾತ್ಮಕವಾದ ವ್ಯತ್ಯಾಸವೇನೂ ಇವುಗಳ ನಡುವೆ ಇಲ್ಲ. ಕರ್ನಾಟಕ ವಿಶ್ವವಿದ್ಯಾನಿಲಯದ 'ಕರ್ನಾಟಕ ಭಾರತಿ' ಎಂಬ ನಿಯತಕಾಲಿಕದ ಬೆಳ್ಳಿಹಬ್ಬದ ನಿಮಿತ್ತವಾಗಿ ಪ್ರಕಟವಾದ ಸಂಚಿಕೆ ಕರ್ನಾಟಕದ ಎಲ್ಲ ಇಪ್ಪತ್ತು ಜಿಲ್ಲೆಗಳಲ್ಲಿ ಬಳಕೆಯಲ್ಲಿರುವ ಕನ್ನಡದ ಆಡುಮಾತಿನ ಪ್ರಭೇದ ಗಳನ್ನು ಲೇಖನರೂಪದಲ್ಲಿ ತೀರ ಸಂಕ್ಷಿಪ್ತವಾಗಿಯಾದರೂ ಪರಿಚಯಿಸುವ ಉದ್ದೇಶ ದೊಂದಿಗೆ ಪ್ರಕಟವಾಗಿದೆ. ಜಿಲ್ಲಾವಾರು ವಿಂಗಡನೆಯೆಂಬುದು ಭಾಷೆಯ ದೃಷ್ಟಿಯಿಂದ ಕೃತಕ ವಾದರೂ ಎಲ್ಲ ಪ್ರದೇಶಗಳ ಆಡುಮಾತುಗಳನ್ನು ಒಂದೆಡೆ ಪರಿಚಯಿಸುವುದು ಇಲ್ಲಿಯ ಗುಣವಿಶೇಷವಾಗಿದೆ. ಈ ಎಲ್ಲ ಅಧ್ಯಯನಗಳಿಗೂ ಈ ಹಿಂದೆ ಹೇಳಿದ ಮಿತಿಗಳು ಅನ್ವ ಯಿಸುತ್ತವೆ.

ಉಪಭಾಷೆಗಳನ್ನು ಕುರಿತ ತೌಲನಿಕ ವರ್ಣನೆ, ದ್ವಿ-ಬಹುಭಾಷಿಕ ಪರಿಸರಗಳಲ್ಲಿಯ ಕನ್ನಡದ ಪ್ರಭೇದಗಳ ವರ್ಣನೆ, ಉಪಭಾಷೆ-ಶಿಷ್ಟಭಾಷೆಗಳ ಸಂಬಂಧವನ್ನು ಕುರಿತ ಅಧ್ಯಯನ, ಇತರ ಅಧ್ಯಯನ ವಿಧಾನಗಳ ಹಿನ್ನೆಲೆಯಲ್ಲಿ ಕನ್ನಡದ ಪ್ರಭೇದಗಳ ವಿಶ್ಲೇಷಣೆ, ಉಪಭಾಷಾಧ್ಯಯನವನ್ನು ಆಧರಿಸಿದ ವಿವೇಚನೆಗಳು ಕನ್ನಡದಲ್ಲಿ ಇಲ್ಲವೆನ್ನುವಷ್ಟು ವಿರಳವಾಗಿ ನಡೆದಿದೆ. 'ಕನ್ನಡದ ನಾಲ್ಕು ಉಪಭಾಷೆಗಳ ತೌಲನಿಕ ಅಧ್ಯಯನ' (ಯು.ಪಿ. ಉಪಾಧ್ಯಾಯ), 'ಬೀದರ್ ಜಿಲ್ಲೆಯ ದ್ವಿಭಾಷಿಕ ಪರಿಸರದ ಕನ್ನಡ' (ಲೇಖನ ಯು.ಪಿ. ಉಪಾಧ್ಯಾಯ) 'ಕನ್ನಡ ಸಾಹಿತ್ಯಕ ಹಾಗೂ ಆಡುಮಾತು' (ಹಾ.ಮಾ.ನಾಯಕ), 'ಕೋಲಾರ ಜಿಲ್ಲೆಯ ದ್ವಿಭಾಷಿಕ ಪರಿಸರದ ಕನ್ನಡ' (ಕೆ.ಪಿ.ಭಟ್), 'ಹವ್ಯಕ ಕನ್ನಡ -ಎ ಟ್ಯಾಗ್ಮಿಮಿಕ್ ಅನಾಲಿಸಿಸ್' ಈ ಮೊದಲಾದವು ಇಂತಹ ಕೆಲವು. ಡಿ. ಎನ್. ಶಂಕರಭಟ್ಟರ 'ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ' (ಇದರ ವಿಸ್ತೃತ ಆವೃತ್ತಿಯಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಕಟಣೆ ಕನ್ನಡ ಭಾಷೆಯ ಕಲ್ಪಿತ ಚರಿತ್ರೆ ಪ್ರಕಟವಾಗಿದೆ)ಯಲ್ಲಿ ಕನ್ನಡಭಾಷೆಯ ಚರಿತ್ರೆ ಯನ್ನು ವರ್ಣಿಸುವಲ್ಲಿ ಉಪಭಾಷಾಮಾಹಿತಿಗಳನ್ನು ಕೆಲಮಟ್ಟಿಗೆ ಬಳಸಿಕೊಳ್ಳಲಾಗಿದೆ. ಕನ್ನಡ ದಲ್ಲಿ ಉತ್ತರ-ದಕ್ಷಿಣ ಎಂಬ ಪ್ರಾದೇಶಿಕ ಪ್ರಭೇದಗಳಿಗಿಂತ ಕರಾವಳಿ-ಕರಾವಳಿಯೇತರ (ಅಥವಾ ಪೂರ್ವ-ಪಶ್ಚಿಮ) ಎಂಬ ವಿಂಗಡಣೆ ಹೆಚ್ಚು ಪ್ರಾಚೀನವಾದದ್ದು ಎಂಬ ಅವರ ಅಭಿಪ್ರಾಯ ಇಂಥ ಮಾಹಿತಿಗಳನ್ನವಲಂಬಿಸಿದೆ.

ಈ ಮೇಲೆ ಹೇಳಿದ ವ್ಯಾಕರಣಗಳಲ್ಲದೆ ಕನ್ನಡದ ಉಪಭಾಷೆಗಳನ್ನಾಧರಿಸಿದ ಶಬ್ದಕೋಶ ಗಳ ರಚನೆಯೂ ಕನ್ನಡದಲ್ಲಿ ಆಗಿದೆ/ಆಗುತ್ತಿದೆ. ಆದರೆ ಇಂಥ ಪ್ರಯತ್ನ ಗಳಾಗಿರುವುದೂ ಬಹಳ ಕಡಿಮೆ. ನನಗೆ ತಿಳಿದಂತೆ ಹವ್ಯಕಸಮಾಜದ (ಅದರಲ್ಲಿಯೂ ದಕ್ಷಿಣ ಕನ್ನಡದ ಹವ್ಯಕದ) ಕನ್ನಡಕ್ಕೆ ಸಂಬಂಧಿಸಿದಂತೆ ಮಾತ್ರ 'ಹವ್ಯಕ ನಿಘಂಟು' ಎಂಬ ಹೆಸರಿನ ಕೋಶ ವೊಂದು ಎಂ.ಮರಿಯಪ್ಪ ಭಟ್ ಅವರಿಂದ ಸಾಕಷ್ಟು ಹಿಂದೆಯೇ ಸಂಪಾದಿತವಾಗಿ ಪ್ರಕಟಿತ ವಾಗಿದೆ. ಆಯ್ದ ಸುಮಾರು ಏಳನೂರು ಶಬ್ದಗಳನ್ನಾಧರಿಸಿದ ಹಳೆಯ ಮೈಸೂರು ಜಿಲ್ಲೆಯ ತಾಲ್ಲೂಕುಗಳಲ್ಲಿಯ ಸಮಾನಾರ್ಥಕ ಪರ್ಯಾಯರೂಪಗಳೊಂದಿಗೆ ಸಿದ್ಧವಾದ ಕಿರು ಪ್ರಮಾ ಣದ ಉಪಭಾಷೆಕೋಶವೊಂದು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡವಿಭಾಗದ ಮೂಲಕ ಎಂ.ಚಿದಾನಂದಮೂರ್ತಿಯವರ ನೇತೃತ್ವದಲ್ಲಿ ಸಿದ್ಧವಾಗಿ, ಅಪ್ರಕಟಿತ ರೂಪದಲ್ಲಿದೆ. ಕನ್ನಡ ವಿಶ್ವವಿದ್ಯಾಲಯದ ಮೂಲಕ ಕನ್ನಡದಲ್ಲಿಯ ವೃತ್ತಿಪದಗಳ ಕೋಶವೊಂದು ಸಿದ್ಧವಾಗಿದೆ. ಇದನ್ನುಳಿದರೆ, ಈ ಹಿಂದೆ ಹೇಳಿದಂತೆ ಆಯಾ ಪ್ರದೇಶ, ಸಮಾಜಗಳನ್ನು ಕುರಿತ ವ್ಯಾಕರಣ ಗಳೊಂದಿಗೆ ಅನುಬಂಧಗಳಾಗಿ ಅಲ್ಲಲ್ಲಿ ಪ್ರಚಲಿತವಾಗಿರುವ ಶಬ್ದಗಳ ಪಟ್ಟಿಗಳು ಸೇರಿ ಕೊಂಡಿವೆ.

**ಸಾಧ್ಯತೆ**

ಈವರೆಗೆ ತಿಳಿಸಿದಂತೆ ಕನ್ನಡದಲ್ಲಿ ಉಪಭಾಷೆಗಳ ಕುರಿತು ಅಧ್ಯಯನಗಳು ಕೆಲಮಟ್ಟಿಗೆ

ನಡೆದಿದ್ದರೂ ಅಪೇಕ್ಷಿತ ಪ್ರಮಾಣದಲ್ಲಿ ನಡೆದಿಲ್ಲವೆನ್ನುವುದು ಸ್ಪಷ್ಟವಾಗಿದೆ. ಕರ್ನಾಟಕ ದಲ್ಲಿಯ ಅನೇಕ ಪ್ರದೇಶ ಹಾಗೂ ಸಮಾಜಗಳ ಭಾಷಾವಿಚಾರಗಳು ದಾಖಲಾಗಿಲ್ಲ. ಆದರೆ ನಮ್ಮ ಸಂದರ್ಭದಲ್ಲಿ ಪ್ರಾದೇಶಿಕ ಹಾಗೂ ಸಾಮಾಜಿಕ ಪ್ರಭೇದಗಳು ಒಂದರ ಜೊತೆಗೆ ಇನ್ನೊಂದು ಹಾಸುಹೊಕ್ಕಾಗಿವೆ. ಸಾಮಾಜಿಕ ಪ್ರಭೇದಗಳು ಪ್ರತ್ಯೇಕವಾಗಿ ನಿಲ್ಲುವಷ್ಟರ ಮಟ್ಟಿಗೆ ಪ್ರಾದೇಶಿಕ ಪ್ರಭೇದಗಳು ಸಾಮಾಜಿಕ ವ್ಯತ್ಯಾಸದಿಂದ ಬೇರೆಯಾಗಿ ನಿಲ್ಲವು. ಈ ಹಿಂದೆ ನಡೆದ ಎಲ್ಲ ಪ್ರಾದೇಶಿಕ ಪ್ರಭೇದಗಳನ್ನಾಧರಿಸಿದ ವರ್ಣನೆಗಳೂ ಒಂದಲ್ಲ ಒಂದು ಸಾಮಾಜಿಕ ಪ್ರಮಾಣದಲ್ಲಿ ಸಾಮಾಜಿಕ ಅಂಶಗಳನ್ನು (ಮುಖ್ಯವಾಗಿ ವ್ಯಾಕರಣಾಂಶಗಳ ವಿಷಯದಲ್ಲಿ) ಬೆರೆಸಿ ಕೊಂಡಿರುತ್ತವೆ. ಆದ್ದರಿಂದ ಎಲ್ಲ ಸಮಾಜಗಳಿಗೆ ಸಾಮಾನ್ಯವಾದ, ಕೇವಲ ಪ್ರಾದೇಶಿಕವಾದ ಅಂಶಗಳನ್ನು ನಿರ್ಧರಿಸುವಲ್ಲಿ ಅಧ್ಯಯನ ವಿಧಾನದಲ್ಲಿ ಬದಲಾವಣೆ-ವಿಭಿನ್ನ ವರ್ಗದ ಹೆಚ್ಚು ಸಂಖ್ಯೆಯ ಮಾಹಿತಿಗಾರರನ್ನು ಒಳಗೊಳ್ಳುವುದು ಹಾಗೂ ವಿಭಿನ್ನ ಸಂದರ್ಭಗಳಲ್ಲಿ ಬಳಕೆಯಾಗುವ ಭಾಷಾಮಾಹಿತಿಗಳನ್ನು ಸಂಗ್ರಹಿಸುವುದು ಅನಿವಾರ್ಯವಾಗಿ ತೋರುತ್ತದೆ.

ವಿಷಯಾನುಗುಣವಾದ ಶಬ್ದಕೋಶಗಳ ರಚನೆ-ಉಪಭಾಷೆಗಳ ಹಿನ್ನೆಲೆಯಲ್ಲಿ ಕನ್ನಡ ದಲ್ಲಿ ಆಗಿಲ್ಲದಿರುವುದು ಒಂದು ಕೊರತೆ. 'ಹವ್ಯಕ ನಿಘಂಟು'ವಿನ ಮಾದರಿಯಲ್ಲಿ ಆಯಾ ಸಮಾಜದ ಕನ್ನಡವನ್ನಾಧರಿಸಿದ ನಿಘಂಟುಗಳ ರಚನೆ-ವೈಯಕ್ತಿಕ ನೆಲೆಯಲ್ಲಿ ಸಾಧ್ಯವಾಗುವಂಥದು ಕನ್ನಡದಲ್ಲಿ ನಡೆಯುವುದು ಅಧ್ಯಯನ ಸಾಧ್ಯತೆಗಳಲ್ಲಿ ಒಂದು.

ಕನ್ನಡದಲ್ಲಿ ಧ್ವನಿವ್ಯತ್ಯಾಸ ವಿಷಯಕವಾದ ಅಧ್ಯಯನಗಳು ನಡೆದಿಲ್ಲ. ಅಂತೆಯೇ ವ್ಯಾಕರಣ ವಿಷಯಗಳಿಗೆ ಸಂಬಂಧಿಸಿದಂತೆಯೂ ಸಾಮಾಜಿಕ ಹಿನ್ನೆಲೆಯನ್ನಾಧರಿಸಿ ಅಧ್ಯಯನಗಳು (ನನಗೆ ತಿಳಿದಂತೆ) ನಡೆದಿಲ್ಲ. ಸಾಮಾಜಿಕ ಭಾಷಾವಿಜ್ಞಾನದಡಿಯಲ್ಲಿ ರೂಪಿತವಾದ ಅಧ್ಯಯನ ವಿಧಾನಗಳ ಹಿನ್ನೆಲೆಯಲ್ಲಿ ನಡೆಯಬೇಕಾದ ಪ್ರಯತ್ನಗಳಿವು. ಉದಾಹರಣೆಗೆ, ಸಕಲೇಶಪುರದ ಸುತ್ತಮುತ್ತಲಿನ ಪರಿಸರದಲ್ಲಿ ಕ್-ಚ್ ಪರಿವರ್ತನೆ ನಡೆದಿದೆ ಎಂಬ ಹೇಳಿಕೆಯಿದೆ. ಇದು ಸೀಮಿತ ಭಾಷಾಮಾಹಿತಿಗಳ ಹಿನ್ನೆಲೆಯಲ್ಲಿ ಕೇವಲ ಭಾಷಿಕ ಹಿನ್ನೆಲೆಯಲ್ಲಿ ನಡೆದ ಅಧ್ಯಯನದ ಫಲವಾಗಿ ರೂಪುಗೊಂಡ ಅಭಿಪ್ರಾಯ. ಸಾಮಾಜಿಕ ಹಿನ್ನೆಲೆಯೊಂದಿಗೆ ಅಧ್ಯಯನ ನಡೆದಾಗ ಮಾತ್ರ ಈ ಬಗೆಗಿನ ನೈಜವಾದ ಚಿತ್ರಣ ದೊರೆಯುವುದು ಸಾಧ್ಯ. ಹೀಗೆಯೇ, ಹಾಲಕ್ಕಿ ಒಕ್ಕಲಿಗ ಸಮಾಜದ ಕನ್ನಡದಲ್ಲಿ ಹಕಾರಾದಿಯಾದ ಕನ್ನಡ ಶಬ್ದಗಳು ಐಚ್ಛಿಕವಾಗಿ ಹಕಾರವನ್ನು ಲೋಪವಾಗುತ್ತದೆಂದೂ ಆದರೆ ಸ್ವರಾದಿಯಾದ ಕನ್ನಡ ಶಬ್ದಗಳು ಶಬ್ದಾದಿಯಲ್ಲಿ ಹಕಾರದ ಉಚ್ಚಾರಣೆಯನ್ನು ಒಳಗೊಳ್ಳುವುದಿಲ್ಲವೆಂದೂ ಹೇಳಲಾಗಿದೆ. ಈ ಹೇಳಿಕೆ ನಿಜವಾಗಿದ್ದಲ್ಲಿ (-ಹ ಲೋಪ ಮಾತ್ರ ವಿದ್ದು ಅತಿಸಾಧುಪ್ರಯೋಗವಿಲ್ಲವೆಂದಾದರೆ-)ಹ ಕಾರದಗ್ರಹಿಕೆ ಮತ್ತು ಉಚ್ಚಾರಣೆಗಳ ವಿಷಯದಲ್ಲಿ ಈ ಸಮಾಜದವರಲ್ಲಿ ವ್ಯತ್ಯಾಸವಿರಬೇಕು. ಅಥವಾ ಈ ಹೇಳಿಕೆಯೇ ಅತಿ ಸರಳೀಕರಣದಿಂದಾಗಿರ ಬೇಕು. ಅಲ್ಲದೇ ಐಚ್ಛಿಕವಾಗಿ ಲೋಪವಾಗುತ್ತದೆಯೆಂಬುದೇ ಸರಳೀಕರಣಗೊಂಡ ಹೇಳಿಕೆ. ಈ ಕುರಿತಾದ ಹೆಚ್ಚಿನ

ವಿಷಯಗಳು ಲಭ್ಯವಾಗ ಬಹುದಾದ್ದು ಸಾಮಾಜಿಕ ಹಿನ್ನೆಲೆಯೊಂದಿಗೆ ದೊಡ್ಡ ಸಂಖ್ಯೆಯ ಮಾಹಿತಿಗಳನ್ನಾಧರಿಸಿದ ಅಧ್ಯಯನಗಳು ನಡೆದಾಗ ಮಾತ್ರ.

ಕನ್ನಡದಲ್ಲಿ ನಡೆದ ಅಧ್ಯಯನಗಳು ಗ್ರಾಮೀಣ ಪರಿಸರವನ್ನಾಧರಿಸಿವೆ ಹಾಗೂ ಕಾರಣಾಂತರಗಳಿಂದ ಆಯ್ದ ಸೀಮಿತ ಸಂಖ್ಯೆಯ ವ್ಯಕ್ತಿಗಳು ನೀಡಿದ ಮಾಹಿತಿಗಳನ್ನಾಧರಿಸಿವೆ ಎಂದು ಈ ಹಿಂದೆಯೇ ಹೇಳಲಾಗಿದೆ. ಆದರೆ ಭಾಷಾವ್ಯತ್ಯಾಸಗಳ ದಿಕ್ಸೂಚಿಯಾಗಿ ಅಥವಾ ಪ್ರವೃತ್ತಿಗಳ ಸೂಚಿಯಾಗಿ, ಕೊನೆಯಪಕ್ಷ ಪೂರಕವಾಗಿ, ನಗರಪರಿಸರ ಹಾಗೂ ದ್ವಿ-ಬಹುಭಾಷಿಕ ಪರಿಸರಗಳಲ್ಲಿಯ ಕನ್ನಡದ ಪ್ರಭೇದಗಳನ್ನು ಸ್ವೀಕರಣ, ನುಡಿಜಿಗಿತ ಮೊದಲಾದವುಗಳನ್ನೊಳಗೊಂಡಂತೆ ಅಧ್ಯಯನಕ್ಕೆ ಒಳಗುಮಾಡುವ ಪ್ರಯತ್ನಗಳು ನಡೆಯಬೇಕಿದೆ. ಭಾಷಾವ್ಯತ್ಯಾಸಗಳ ಅಧ್ಯಯನದ ದೃಷ್ಟಿಯಿಂದ ಇಂದು ಬಹುಭಾಷಿಕ ಪರಿಸರಗಳ ವರ್ಣನೆ-ವಿಶ್ಲೇಷಣೆಗಳು ಉಪಭಾಷಾಧ್ಯಯನದ ಇನ್ನೊಂದು ಮಗ್ಗುಲಾಗಿದೆ. ಶಿಷ್ಟಭಾಷೆ-ಉಪಭಾಷೆಗಳ ನಡುವೆ ನಡೆಯುವ ಜಿಗಿತಗಳನ್ನು ಕುರಿತ ಅಧ್ಯಯನ ಕೂಡಾ ಇದೇ ಕಾರಣದಿಂದ ಮುಖ್ಯವಾದುದು.

# ದ್ವಿಭಾಷಿಕತೆ ಮತ್ತು ಕನ್ನಡ ಭಾಷಾಭಿವೃದ್ಧಿ

ಡಾ.ಸಾಂಬಮೂರ್ತಿ

ಭಾರತವು ವಿಶ್ವದ ಬಹುಭಾಷಿಕ ರಾಷ್ಟ್ರಗಳಲ್ಲಿ ಒಂದು. ೧೬೫೨ ಭಾಷೆ ಮತ್ತು ಉಪಭಾಷೆಗಳನ್ನು ಆಡುವ ಜನ ಭಾರತದಲ್ಲಿದ್ದಾರೆಂದು ೧೯೬೧ರ ಜನಗಣತಿ ವರದಿ ಹೇಳುತ್ತದೆ. ಭಾರತದಲ್ಲಿ ಆಡಲಾಗುತ್ತಿರುವ ಭಾಷೆಗಳ ಬಗ್ಗೆ ವಿವಿಧ ಪಂಡಿತರು ಈ ರೀತಿ ಅಭಿಪ್ರಾಯಪಡುತ್ತಾರೆ. ಖೂಬ್ ಚಂದಾನಿ (೧೯೭೮)ರವರು ಭಾರತದ ಗಡಿಯೊಳಗೆ ೨೦೦ ವರ್ಗೀಕೃತ ಭಾಷೆಗಳನ್ನು ಮಾತನಾಡಲಾಗುತ್ತಿದೆ ಎಂದರೆ, ಗ್ರಿಮ್ಸ್ (೧೯೭೮) ೩೧೨ ಎಂದು ಪಟ್ಟಿಮಾಡುತ್ತಾರೆ. ಲೆಪೆಜ್ (೧೯೬೪)೮೪೪ ಭಾಷೆಗಳನ್ನುತ್ತಾರೆ. ಇದೇನೇ ಇದ್ದರೂ ಭಾರತವೊಂದು ಬಹುಭಾಷಿಕ ರಾಷ್ಟ್ರವಂತೂ ಹೌದು.

ಕರ್ನಾಟಕದಲ್ಲಿ ೧೭೭ ಮಾತೃಭಾಷೆಗಳನ್ನಾಡುವ ಜನರಿದ್ದಾರೆ. ಬಹುತೇಕ ಊರುಗಳು ಒಂದಕ್ಕಿಂತ ಹೆಚ್ಚು ಭಾಷೆಗಳನ್ನಾಡುವ ಜನರಿಂದ ಕೂಡಿದೆ. ಅಷ್ಟೇ ಅಲ್ಲ, ಕರ್ನಾಟಕಕ್ಕೆ ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ, ಗೋವಾ, ಕೇರಳ ರಾಜ್ಯಗಳ ಗಡಿ ಪ್ರದೇಶವಿರುವ ಕಾರಣ, ಗಡಿ ಪ್ರದೇಶದ ಜನರು ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಆಡುವವರಿದ್ದಾರೆ. ಇಲ್ಲಿನ ಜನರು ತೆಲುಗು, ತಮಿಳು, ಮಲಯಾಳಂ, ಮರಾಠಿ ಪ್ರಭಾವಕ್ಕೆ ಒಳಗಾಗಿ ಆ ಭಾಷೆಗಳನ್ನು ಬಳಸುವವರಾಗಿದ್ದಾರೆ. ಭಾಷಾವಾರು ಪ್ರಾಂತ್ಯ ರಚನೆಯಾಗಿದ್ದರೂ ಸಹ ಬೇರೆ ಭಾಷೆಗಳನ್ನಾಡುವ ಜನ ಕರ್ನಾಟಕದಲ್ಲಿ ವಾಸಿಸುತ್ತಿರುವುದರಿಂದ ಅವರೆಲ್ಲಾ ರಾಜ್ಯ ಭಾಷೆ ಕನ್ನಡವನ್ನು ಕಲಿತು ವ್ಯವಹರಿಸುವುದು ಅವಶ್ಯಕವಾದ ಕಾರಣ ದ್ವಿಭಾಷಿಕರಾಗಿರುವುದು ಕಂಡುಬಂದಿದೆ.

ಒಂದು ರಾಜ್ಯದಲ್ಲಿ ಒಂದೇ ಭಾಷೆಯನ್ನಾಡಬೇಕೆಂಬ ನಿಯಮವೇನಿಲ್ಲ. ಏಕೆಂದರೆ ಇಂದು ನಡೆದಿರುವ ವ್ಯಾಪಾರ, ವ್ಯವಹಾರ ನಾಳೆ ಬದಲಾಗಬಹುದು. ಹಾಗೆಯೇ ವ್ಯಾಪಾರ ಸ್ಥರ ನೆಲೆಯೂ ಬದಲಾಗಬಹುದು. ವ್ಯಾಪಾರ, ವಾಣಿಜ್ಯ, ರಾಜಕೀಯ, ಸೇವೆ, ವಲಸೆ, ಸಾಮ್ರಾಜ್ಯ ವಿಸ್ತಾರ ಹೀಗೆ ಅನೇಕ ಅಂಶಗಳು ನೆಲೆಗಳ ಬದಲಾವಣೆಗೆ ಕಾರಣವಾಗುತ್ತದೆ. ಹಾಗಾಗಿ ಒಂದಕ್ಕಿಂತ ಹೆಚ್ಚುಭಾಷೆಗಳನ್ನು ಬಲ್ಲ ಜನರು ಎಲ್ಲ ರಾಜ್ಯಗಳಲ್ಲೂ ಕಾಣಸಿಗು ತ್ತಾರೆ. ಹೀಗೆ ನೆಲೆಗಳನ್ನು ಬದಲಾಯಿಸಿದ ಜನರು ತಮ್ಮ ಮಾತೃಭಾಷೆಯನ್ನು ಉಳಿಸಿ ಕೊಂಡು

ಬೇರೊಂದು ಭಾಷೆಯನ್ನು ಕಲಿತು ವ್ಯವಹರಿಸುವ ಕ್ರಿಯೆಯನ್ನು 'ದ್ವಿಭಾಷಿಕತೆ ' ಎನ್ನಲಾಗುತ್ತದೆ. ಎರಡು ಭಾಷೆಯಲ್ಲಿ ವ್ಯವಹರಿಸುವ ಸಾಮರ್ಥ್ಯ ಹೊಂದಿರುವ ವ್ಯಕ್ತಿಯನ್ನು 'ದ್ವಿಭಾಷಿಕ' ಎಂದು ಕರೆಯಲಾಗುತ್ತದೆ. ಮಾತೃಭಾಷೆಯಲ್ಲದೆ ಬೇರೊಂದು ಭಾಷೆಯಲ್ಲಿ ಕೇವಲ ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿದ್ದು ಅಭಿವ್ಯಕ್ತಿಸುವ ಸಾಮರ್ಥ್ಯವಿಲ್ಲದಿದ್ದರೆ ಅದನ್ನು 'ಅರ್ಧದ್ವಿಭಾಷಿಕತೆ' ಎಂದು ಕರೆಯಲಾಗುತ್ತದೆ. ದ್ವಿಭಾಷಿಕತೆ ಹಾಗೂ ದ್ವಿಭಾಷಿಕ ಕುರಿತಂತೆ ವಿದ್ವಾಂಸರು ಹೀಗೆನ್ನುತ್ತಾರೆ, ಬ್ಲೂಮ್‌ಫೀಲ್ಡ್ (೧೯೩೩) 'ಎರಡೂ ಭಾಷೆಯಲ್ಲಿ ಪ್ರಭುತ್ವವನ್ನು ಹೊಂದಿರುವ ವ್ಯಕ್ತಿಮಾತ್ರ ದ್ವಿಭಾಷಿಕನೆನಿಸಿಕೊಳ್ಳುತ್ತಾನೆ' ಎಂದರೆ ಮ್ಯಾಕ್ನಮಾರ (೧೯೬೭) ಅವರು ಭಾಷಾನೈಪುಣ್ಯಗಳಲ್ಲಿ ಯಾವುದಾದರೊಂದು ಅಂದರೆ, ಮಾತನಾಡುವ, ಓದುವ, ಬರೆಯುವ ಅರ್ಥಮಾಡಿಕೊಳ್ಳುವ ಸಾಮರ್ಥ್ಯದಲ್ಲಿ ಪರಿಪೂರ್ಣನಾಗಿದ್ದರೂ ಅವ ನನ್ನು ದ್ವಿಭಾಷಿಕ ಎನ್ನಬಹುದು ಎನ್ನುತ್ತಾರೆ. ಅಂದರೆ ಮಾತೃಭಾಷೆಯ ಜೊತೆಗೆ ಇನ್ನೊಂದು ಭಾಷೆಯಲ್ಲಿ ಮೇಲಿನ ಯಾವುದಾದರೊಂದು ಸಾಮರ್ಥ್ಯವಿರಬೇಕು. ದ್ವಿಭಾಷಿಕನಾದವನಿಗೆ ಎರಡನೇ ಭಾಷೆಯಲ್ಲೂ ತನ್ನ ಮಾತೃಭಾಷೆಯ ಮಟ್ಟದ ಪ್ರಭುತ್ವವೇ ಇರುತ್ತದೆಂಬುದನ್ನು ಹೇಳಲಾಗುವುದಿಲ್ಲ.

ದ್ವಿಭಾಷಿಕ ವಲಯದಲ್ಲಿ ಎರಡು ಭಾಷೆಗಳ ಬಳಕೆಯೂ ಇರುವುದೆಂದು ತಿಳಿದಿದೆ. ಹಾಗೆ ಬಳಸುವಾಗ ಒಂದು ಭಾಷೆಯ ಪದ ಇನ್ನೊಂದು ಭಾಷೆಯಲ್ಲಿ ಮಿಶ್ರಣವಾಗುವ ಕ್ರಿಯೆಯನ್ನು ಭಾಷಾಶಾಸ್ತ್ರದಲ್ಲಿ 'ಭಾಷಾಮಿಶ್ರಣ/ನುಡಿಮಿಶ್ರಣ' ಎನ್ನಲಾಗಿದೆ. ವಾಕ್ಯಗಳಲ್ಲಿ ಆಗುವ ಪಲ್ಲಟವನ್ನು ಭಾಷಾಪಲ್ಲಟ/ನುಡಿಪಲ್ಲಟ ಎನ್ನಲಾಗುತ್ತದೆ. ಭಾಷಾಮಿಶ್ರಣ ಒಂದು ವಾಕ್ಯದೊಳಗಾದರೆ ಭಾಷಾಪಲ್ಲಟ ಎರಡು ವಾಕ್ಯಗಳ ನಡುವೆ ನಡೆಯುತ್ತದೆ. ಅಂದರೆ ಭಾಷೆಗಳು ಒಂದರ ಪಕ್ಕದಲ್ಲೊಂದು ಕೆಲಸ ಮಾಡುತ್ತವೆ. ದ್ವಿಭಾಷಿಕ ಎನಿಸಿಕೊಂಡ ಸಮಾಜ ತಾನು ಬಳಸುವ ವಿವಿಧ ಭಾಷೆಗಳನ್ನು ಅಥವಾ ಭಾಷಾಪ್ರಭೇದವನ್ನು ಬೇರೆ ಬೇರೆ ವಲಯಗಳಲ್ಲಿ ಭಿನ್ನ ರೀತಿಯಲ್ಲಿ ಬಳಸುತ್ತಾ ಬಂಧರೆ, ಅಂದರೆ ಮನೆಯಲ್ಲಿ, ವ್ಯಾಪಾರ, ಉದ್ಯೋಗ ಹೀಗೆ ಒಂದ ರೊಡನೊಂದು ಬೆರೆಸದೆ ಕಾಪಾಡಿಕೊಂಡು ಬಂದ ಪಕ್ಷದಲ್ಲಿ ಅದನ್ನು 'ದ್ವಿಸ್ತರತೆ' ಎಂದು ಕರೆಯಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ದ್ವಿಭಾಷಿಕ ಪರಿಸರ ರೂಪು ಗೊಳ್ಳುತ್ತದೆ. ಕೆಲ ವೊಮ್ಮೆ ಭಾಷೆಗಳ ನಡುವಣ ರಚನಾ ವಿನ್ಯಾಸ ಶಿಥಿಲಗೊಳ್ಳುತ್ತಾ ಹೋಗಿ ಒಂದೇ ವ್ಯಾಕರಣ ವಿನ್ಯಾಸದಲ್ಲಿ ಕೇವಲ ಶಬ್ದವ್ಯತ್ಯಾಸ ಮಾತ್ರ ಉಳಿಯಬಹುದು ಇದನ್ನು 'ಭಾಷಾ ಸಂಗಮ' ಎನ್ನಲಾಗುತ್ತದೆ. ಕರ್ನಾಟಕ-ಮಹಾರಾಷ್ಟ್ರ ಗಡಿ ಪ್ರದೇಶದ ಭಾಗವಾದ ಕುಪ್‌ವಾರ್ ಗ್ರಾಮದಲ್ಲಿ ಕನ್ನಡ-ಮರಾಠಿ-ಉರ್ದು ಪರಿಸರದಲ್ಲಿ ಈ ರೀತಿಯ ಭಾಷಾ ಸಂಗಮವನ್ನು ಕಾಣಬಹುದೆಂದು ಗುಂಪರ್ಸ್ ಮತ್ತು ವಿಲ್ಸನ್ (೧೯೭೧)ರವರು ಹೇಳುತ್ತಾರೆ.

ದ್ವಿಭಾಷಿಕತೆಯನ್ನು ಕುರಿತಂತೆ ಕರ್ನಾಟಕದಲ್ಲಿ ಸಾಕಷ್ಟು ಕೆಲಸ ನಡೆದಿಲ್ಲ. ಕಳೆದ ೨೫ ವರ್ಷಗಳಲ್ಲಿ ಕೆಲ ಬಿಡಿ ಲೇಖನಗಳು ಮಾತ್ರ ಬಂದಿವೆ. ಆಂಧ್ರ ಕರ್ನಾಟಕ ಸರಹದ್ದಿನಲ್ಲಿ ಕನ್ನಡ (ಬಿ.ರಾಮಚಂದ್ರರಾವ್) ಕರ್ನಾಟಕದಲ್ಲಿ ಕನ್ನಡ-ಮರಾಠಿ ದ್ವಿಭಾಷಿಕತೆ (ಎಸ್. ಎಸ್.

ಅಂಗಡಿ), ಕನ್ನಡ-ತೆಲುಗು ದ್ವಿಭಾಷಿಕತೆಯ ಅಧ್ಯಯನ (ಕೃಷ್ಣಪರಮೇಶ್ವರಭಟ್ಟ) ಹಾಗೂ ಕೊಡಗು-ಬಹುಭಾಷಿಕ ಜಿಲ್ಲೆ ಒಂದು ಅಧ್ಯಯನ (ಎಂ.ಟಿ.ರತಿ) ಮುಖ್ಯವಾದವು. ಕರ್ನಾಟಕದ ಹೊರಗಿನ ಕೆಲವು ಅಧ್ಯಯನಗಳೆಂದರೆ ಕೇರಳದ ಕನ್ನಡ, ಕಾಸರಗೋಡು ಕನ್ನಡ, ಮಹಾರಾಷ್ಟ್ರದ ಗಡಿನಾಡಿನ ಕನ್ನಡವನ್ನು ಹೆಸರಿಸಬಹುದು. ಇಲ್ಲಿನ ಕೆಲವೊಂದು ಲೇಖನಗಳು ವರ್ಣನಾತ್ಮಕವಾಗಿದ್ದರೂ ಕೆಲವು ಲೇಖನಗಳಲ್ಲಿ ಭಾಷಾಮಿಶ್ರಣ, ಭಾಷಾಪಲ್ಲಟ, ವ್ಯಾಕರಣದ ಪ್ರಭಾವ, ದ್ವಿಸ್ತರತೆ ಮುಂತಾದವುಗಳೂ ಮೂಡಿಬಂದಿವೆ.

ಈ ಲೇಖನದಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡದ ಅಭಿವೃದ್ಧಿಯಲ್ಲಿ ದ್ವಿಭಾಷಿಕತೆಯ ಪಾತ್ರವನ್ನು ಚರ್ಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಕರ್ನಾಟಕದಲ್ಲಿನ ದ್ವಿಭಾಷಾಪ್ರದೇಶಗಳನ್ನು ಲಕ್ಷಿಸಲಾಗಿದೆ.

ವರ್ಣನಾತ್ಮಕ ಮಾದರಿಯಲ್ಲಿ ಬಂದಿರುವ ಕೋಲಾರ ಜಿಲ್ಲೆಯ ಕನ್ನಡ-ತೆಲುಗು ದ್ವಿಭಾಷಿಕತೆಯ ಅಧ್ಯಯನದಿಂದ ಹೊರಹೊಮ್ಮುವ ಅಂಶವೆಂದರೆ, ಜಿಲ್ಲೆಯ ಜನಸಂಖ್ಯೆ ಯಲ್ಲಿ ತೆಲಗು ಮಾತೃಭಾಷಿಕರ ಸಂಖ್ಯೆ ಕನ್ನಡ ಮಾತೃಭಾಷಿಕರ ಸಂಖ್ಯೆಗಿಂತ ಎರಡೂವರೆ ಪಟ್ಟು ಹೆಚ್ಚೆಂಬುದು. ಬೇರೆ ಭಾಷಿಕರು ಕನ್ನಡ ಕಲಿತು ದ್ವಿಭಾಷಿಕರಾಗುವುದಕ್ಕಿಂತ ಕನ್ನಡ ದವರು ಇನ್ನೊಂದು ಭಾಷೆಯನ್ನು ಕಲಿತು ದ್ವಿಭಾಷಿಕರಾದುದೆ ಹೆಚ್ಚು. (ಶೇ. ೬೫.೬೭). ಅದರಲ್ಲೂ ತೆಲುಗು ಕಲಿತವರ ಸಂಖ್ಯೆ ಶೇ. ೬೩.೩೭ರಷ್ಟು ಇದಕ್ಕೆ ಪ್ರತಿಯಾಗಿ ತೆಲುಗು ಮಾತೃಭಾಷಿಕರು ಬೇರೆ ಭಾಷೆ ಕಲಿತು ದ್ವಿಭಾಷಿಕರಾದುದು ಶೇ. ೯.೧೪ರಷ್ಟು ಮಾತ್ರ ವಾದರೂ ಇವರಲ್ಲಿ ಕನ್ನಡ ಕಲಿತವರ ಪ್ರಮಾಣ ಹೆಚ್ಚು. ಈ ಅಧ್ಯಯನದ ಪ್ರಕಾರ ತೆಲಗು ಭಾಷಿಕರು ಕನ್ನಡ ಕಲಿಯುವ ಅವಶ್ಯಕತೆಯೇ ಹೆಚ್ಚು ಎಂಬುದು ಅಥವಾ ಕನ್ನಡ ಭಾಷಿಕರ ಒಲವು ತೆಲುಗಿನ ಕಡೆಗೇ ಎಂಬುದು ಇಲ್ಲಿ ಸೂಚಿತವಾಗಿದೆ.

ವಿವಿಧ ವಲಯಗಳಲ್ಲೂ ಸಹಾ ತೆಲುಗಿನ ಪ್ರಾಮುಖ್ಯತೆಯೇ ಮೆರೆದಿದೆ. ಕನ್ನಡ-ತೆಲುಗು, ತೆಲುಗು-ಕನ್ನಡ ದ್ವಿಭಾಷಿಕರು ಸೇರಿದಾಗ ಬಳಕೆಯಾಗುವ ಭಾಷೆ ತೆಲುಗೇ ಆಗಿದೆ ಎಂದು ಅಧ್ಯಯನ ತಿಳಿಸುತ್ತದೆ. ಇದು ಕನ್ನಡ ಪ್ರದೇಶವಾದರೂ ತೆಲುಗಿನ ವಾರ, ಮಾಸ ಪತ್ರಿಕೆಗಳು ಹೆಚ್ಚು ಪ್ರಸಾರದಲ್ಲಿ ಇರುವುದನ್ನು ಈ ಅಧ್ಯಯನ ಸೂಚಿಸುತ್ತದೆ. ವ್ಯಾಪಾರ, ಹರಟೆಯ ಸಂದರ್ಭಗಳಲ್ಲೂ ಸಹ ತೆಲುಗು ಭಾಷೆಯ ಬಳಕೆ ಅಧಿಕವಾಗಿದೆ.

ಕನ್ನಡ-ತೆಲುಗು ಎರಡೂ ಮಾತೃಭಾಷಿಕರ ಭಾಷಾಬಳಕೆಯಲ್ಲಿ ಭಾಷಾಮಿಶ್ರಣ ಅಧಿಕವಾಗಿ, ಭಾಷಾಪಲ್ಲಟ ಅಲ್ಲಲ್ಲಿ ಕಂಡುಬಂದರೂ ಕನ್ನಡ-ತೆಲುಗು ಎರಡೂ ಸಾಂಸ್ಕೃತಿಕವಾಗಿ ಸಾಹಿತ್ಯಿಕವಾಗಿ ಸಮಾನ ಭಾಷೆಗಳಾದ್ದರಿಂದ ಪರಸ್ಪರ ಪ್ರಭಾವವನ್ನು ಕಾಣಬಹುದಾಗಿದೆಯೇ ಹೊರತು, ಒಂದು ಇನ್ನೊಂದರಲ್ಲಿ ವಿಲೀನಗೊಳ್ಳುವ, ಅಸ್ತಿತ್ವವನ್ನು ಕಳೆದುಕೊಳ್ಳುವ ಸಾಧ್ಯತೆಗಳಿಲ್ಲ. ಆದರೆ ಜನರ ಒಲವು ಮಾತ್ರ ತೆಲುಗಿನ ಕಡೆಗೇ ಎಂಬುದು ಅಧ್ಯಯನದ ಮುಖ್ಯಾಂಶವಾಗಿದೆ.

ಈ ಮೇಲಿನ ಸಂಗತಿಗಳು ಈ ಮೊದಲೇ ಪ್ರಕಟವಾಗಿದ್ದ ಲೇಖನ 'ಆಂಧ್ರ ಕರ್ನಾಟಕ ಸರಹದ್ದಿನಲ್ಲಿ ಕನ್ನಡ'ದಲ್ಲೂ ಸೂಕ್ಷ್ಮವಾಗಿ ಗೋಚರಿಸುತ್ತದೆ. ಅಂದರೆ ಕನ್ನಡಿಗರ ಭಾಷಾ ಬಳಕೆಯಲ್ಲಿ ತೆಲುಗಿನ ಪ್ರಭಾವ ಎಷ್ಟರ ಮಟ್ಟಿಗೆ ಆಗಿದೆಯೆಂದರೆ, ಹಲವಾರು ತೆಲುಗು ಪದಗಳನ್ನು ಕನ್ನಡದ ವಿಭಕ್ತಿ ಪ್ರತ್ಯಯಗಳೊಡನೆ ಬಳಕೆಯಾಗುತ್ತಿರುವುದೂ (ಗುಂಜರೋನಿ (ತೆ)-ಗುಂಜುಕೊಂಡು (ಕ),ದುನ್ನಿದ್ರು (ತೆ)-ಉಳ್ತಿದ್ರು (ಕ) ಇತ್ಯಾದಿ), ತೆಲುಗು ಸಂಖ್ಯಾ ವಾಚಿಗಳ ಬಳಕೆ (ಯಾಭೈ-ಯಾಬತ್ತು; ಪನ್ನೆರಡು ಇತ್ಯಾದಿ) ಹೊಸ ಸಮಾಸಪದಗಳ ರಚನೆ (ಕರಿಇರುವೆ- ಕರೀಸೀಮೆ) ಇತ್ಯಾದಿಗಳನ್ನು ಕಾಣಬಹುದೆಂದು ಅಧ್ಯಯನ ತಿಳಿಸುತ್ತದೆ. ಒಟ್ಟಿನಲ್ಲಿ ಕನ್ನಡದ ಬಳಕೆಗಿಂತ ತೆಲುಗಿನ ಬಳಕೆಯೇ ಹೆಚ್ಚೆಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

ಕನ್ನಡ-ಮರಾಠಿ ದ್ವಿಭಾಷಿಕ ಪರಿಸರವನ್ನು ನೋಡಿದರೆ ಅಲ್ಲಿಯೂ ಕನ್ನಡಕ್ಕೆ ಪೆಟ್ಟು ಬಿದ್ದಿರುವುದು ಗೋಚರಿಸುತ್ತದೆ. 'ಮಹಾರಾಷ್ಟ್ರದ ಕನ್ನಡ' (ಕೆ.ಜಿ.ಶಾಸ್ತ್ರಿ) ಕನ್ನಡದ ಮೇಲೆ ಮರಾಠಿಯ ಪ್ರಭಾವವನ್ನು ಮರಾಠಿಯ ಪರಿಸರದಲ್ಲಿ ಗುರ್ತಿಸಿದರೆ, ಎಸ್.ಎಸ್. ಅಂಗಡಿಯವರು (೧೯೯೭) ಕನ್ನಡ ನೆಲದಲ್ಲಿ ಗುರ್ತಿಸುತ್ತಾರೆ. ಎರಡು ಭಾಷೆಗಳೂ ಭಿನ್ನ ಭಾಷಾ ಕುಟುಂಬಕ್ಕೆ ಸೇರಿದ್ದರೂ ಭಾಷಾ ಸಂಪರ್ಕದ ಕಾರಣದಿಂದ ಎರಡೂ ಭಾಷೆಗಳ ಸಂಬಂಧ ಕೇವಲ ಸ್ವೀಕರಣ ಹಂತದಲ್ಲಿರದೆ ಭಾಷಾಮಿಶ್ರಣ, ಭಾಷಾಪಲ್ಲಟ, ದ್ವಿಸ್ತರತೆ ಮುಂತಾದ ಭಾಷಾಪ್ರಕ್ರಿಯೆಗಳ ನಿದರ್ಶನವೂ ದೊರೆಯುತ್ತದೆ ಎಂದು ಅಂಗಡಿಯವರು ಗುರ್ತಿಸುತ್ತಾರೆ. ಸಾಮಾನ್ಯವಾಗಿ ಮರಾಠಿ ಪ್ರಭಾವಿತ ಕನ್ನಡ ಪ್ರದೇಶದಲ್ಲಿ ಕನ್ನಡ ಸಂಖ್ಯಾವಾಚಿಗಳ ಬಳಕೆ ತುಂಬಕಡಿಮೆ ಎನ್ನುವುದು, ಮರಾಠಿ ಎಷ್ಟರ ಮಟ್ಟಿಗೆ ಆಕ್ರಮಿಸಿದೆ ಎನ್ನುವುದನ್ನು ತಿಳಿಸುತ್ತದೆ. ಭಾಷಾಮಿಶ್ರಣ, ಭಾಷಾಪಲ್ಲಟದ ಕಾರಣದಿಂದಾಗಿ ಅನೇಕ ಮರಾಠಿ ನುಡಿ ಗಟ್ಟುಗಳು ಕನ್ನಡದಲ್ಲಿ ಉಪಯೋಗವಾಗುತ್ತಿರುವುದನ್ನು ಈ ಅಧ್ಯಯನದಲ್ಲಿ ಕಾಣ ಬಹುದಾಗಿದೆ. ಇಷ್ಟೇ ಅಲ್ಲದೆ ಮರಾಠಿಯ ಕೆಲವು ವ್ಯಾಕರಣಾಂಶಗಳು, ಉದಾ: 'ಭೀ' ಪ್ರತ್ಯಯ ಕನ್ನಡದಲ್ಲಿ ಬಳಕೆಯಾಗುತ್ತದೆ. (ಸಾಲಿಗೆ ಬಸಪ್ಪ ಭೀ ನಿಂಗಪ್ಪ ಹ್ವಾದರು). ಅಲ್ಲದೆ ಮರಾಠಿಯ ಅನೇಕ ಪದಗಳು ತೀರಾ ಸಹಜವೋ ಎಂಬಂತೆ ಕನ್ನಡದಲ್ಲಿ ಬಳಕೆ ಯಾಗುತ್ತಿರುವುದನ್ನು ಈ ಅಧ್ಯಯನದಲ್ಲಿ ಪ್ರಸ್ತಾಪಿಸಲಾಗಿದೆ.

ಇಲ್ಲೂ ಸಹ ತೆಲುಗಿನಂತೆ, ಕನ್ನಡಿಗರು ಮರಾಠಿ ಕಲಿತು ದ್ವಿಭಾಷಿಕರಾದ ಪ್ರಮಾಣವೇ ಹೆಚ್ಚು (೬೦%). ಇದರಿಂದ ಕನ್ನಡ ಕಲಿಯುವ ಅವಶ್ಯಕತೆಗಿಂತ ಮರಾಠಿ ಕಲಿಯುವ ಅವಶ್ಯಕತೆಯೇ ಹೆಚ್ಚಾಗಿರುವುದು ಗೋಚರವಾಗುತ್ತದೆ. ಅಷ್ಟೇ ಅಲ್ಲ, ಜಾಹೀರಾತುಗಳು ಮೊದಲು ಮರಾಠಿಯಲ್ಲಿ ಪ್ರಕಟವಾದ ನಂತರ ಕನ್ನಡ ಆವೃತ್ತಿಯಲ್ಲಿ ಬರುತ್ತಿವೆ. 'ಈ ಗಡಿ ಪ್ರದೇಶದಲ್ಲಿ ನಡೆಯುವ ವಿದ್ಯಮಾನಗಳನ್ನು ಗಮನಿಸಿದಾಗ ಕನ್ನಡಿಗರ ಭಾಷಾ ಒಲವು ಮರಾಠಿಯ ಕಡೆಗಿದೆಯೆಂದು ಕಾಣುತ್ತದೆ' ಎಂದು ಅಧ್ಯಯನ ತಿಳಿಸುತ್ತದೆ.

ಉರ್ದು ಮಾತೃಭಾಷಿಕ ಮುಸಲ್ಮಾನರು ವಿವಿಧ ಪರಿಸರ ಸನ್ನಿವೇಶಗಳಲ್ಲಿ ಬಳಸುವ ಕನ್ನಡದ ಬಗೆಗಿನ ಲೇಖನದಲ್ಲಿಯೂ (ಕಲಬುರ್ಗಿ ಮುಸಲ್ಮಾನರ-ಕನ್ನಡ, ಸಂಗಮೇಶ ಸವದತ್ತಿಮಠ) ಕನ್ನಡಕ್ಕೆ ಮೂರನೇ ಸ್ಥಾನ ಇರುವುದನ್ನು ಸೂಚಿಸುತ್ತದೆ. ಈ ಅಧ್ಯಯನದ ವ್ಯಾಪ್ತಿ ಕಲಬುರ್ಗಿ ನಗರವಾಗಿದ್ದು ಇಲ್ಲಿನ ಮುಸಲ್ಮಾನರು ವಿವಿಧ ವಲಯಗಳಲ್ಲಿ ಕನ್ನಡ ಬಳಸುವ ಬಗ್ಗೆ ಅಧ್ಯಯನಿಸಲಾಗಿದೆ. ಅಲ್ಲಿನ (ಮುಸಲ್ಮಾನರ) ಕನ್ನಡದಲ್ಲಿ ಪ್ರತಿಶತ ೪೦ರಷ್ಟು ಉರ್ದು ಶಬ್ದಗಳಿರುತ್ತವೆ ಎಂದು ಹೇಳಲಾಗಿದೆ. ಕೇವಲ ವ್ಯಾವಹಾರಿಕ ಕ್ಷೇತ್ರದಲ್ಲಿ ಮಾತ್ರ ಕನ್ನಡ ಬಳಕೆಯಿದೆ. ಉಳಿದಂತೆ ಉರ್ದು ಇಲ್ಲವೇ ಇಂಗ್ಲಿಶ್. ಕನ್ನಡ ಮಾತನಾಡು ವಾಗಲೂ ಸಹಾ ಉರ್ದುವಿಗೆ ನುಡಿಪಲ್ಲಟ ಮಾಡುತ್ತಾರೆ. ಅಲ್ಲದೇ ನುಡಿಬೆರಕೆಯಂತೂ ಇದ್ದೇ ಇದೆ. ತಟ್ಟನೆ ಹೊಳೆಯದ ಕನ್ನಡ ಶಬ್ದಗಳಿಗೆ ಉರ್ದು ಸೇರಿಸುತ್ತಾರೆ.

ಕನ್ನಡದ ಬಗೆಗಿನ ಒಲವು ಕುರಿತಂತೆ ಹೇಳುವುದಾದರೆ, ಕನ್ನಡವನ್ನು ವ್ಯವಹಾರದ ಮಟ್ಟಿಗೆ ಕಲಿತರೆ ಸಾಕೆಂಬ ಭಾವನೆ ಅವರಲ್ಲಿದೆ ಎಂಬುದು ಅಧ್ಯಯನದ ಮುಖ್ಯಾಂಶ. ಅವರು ತಮ್ಮ ಮಕ್ಕಳನ್ನು ಇಂಗ್ಲಿಶ್ ಅಥವಾ ಉರ್ದು ಶಾಲೆಗೆ ಸೇರಿಸಲು ಇಚ್ಛಿಸುವುದು ಕಂಡು ಬರುತ್ತದೆ. ಇದರಿಂದಾಗಿ ಅವರ ಪ್ರಥಮ ಆದ್ಯತೆ ಉರ್ದು, ನಂತರ ಇಂಗ್ಲಿಶ್ ಮತ್ತು ಮೂರನೆಯದಾಗಿ ಕನ್ನಡವಾಗುತ್ತದೆ. ಸುಶಿಕ್ಷಿತ ಮುಸಲ್ಮಾನರು ಶಿಷ್ಟ ಕನ್ನಡ ಬಳಸಿ ನಡುನಡುವೆ ಇಂಗ್ಲಿಶ್ ಪದಗಳ ಬೆರಕೆ ಮಾಡುತ್ತಾರೆ. ನುಡಿಜಿಗಿತ ಕಡಿಮೆ. ಆದರೆ ಅಶಿಕ್ಷಿತ ಮುಸಲ್ಮಾನರಲ್ಲಿ ನುಡಿ ಜಿಗಿತ, ನುಡಿಬೆರಕೆ, ಉರ್ದು ಬೆರಕೆ ಹೆಚ್ಚು ಎಂದು ಹೇಳಲಾಗಿದೆ.

ಕೊಡಗು ಒಂದು ಬಹುಭಾಷಿಕ ಪ್ರದೇಶ. ಇಲ್ಲಿ ಕನ್ನಡ, ಕೊಡವ, ಕೊಂಕಣಿ, ತುಳು, ಮಲಯಾಳಂ ಭಾಷೆಗಳನ್ನು ಆಡಲಾಗುತ್ತದೆ. ಇಲ್ಲಿನ ಭಾಷಾ ಸ್ಥಿತಿಯ ಬಗೆಗಿನ ಅಧ್ಯಯನ ದಲ್ಲಿ (ಕೊಡಗು ಬಹುಭಾಷಿಕ ಜಿಲ್ಲೆ ಒಂದು ಅಧ್ಯಯನ-ಎಂ.ಟಿ. ರತಿ) ಕೊಡವ, ಕನ್ನಡ, ಮಲಯಾಳಂ, ತುಳು ಭಾಷಿಕರ ಭಾಷಾ ಒಲವುಗಳನ್ನು ಕುರಿತು ಚರ್ಚಿಸಲಾಗಿದೆ. ಕೊಡವ, ಮಲಯಾಳಂ, ತುಳು, ಮಾತೃಭಾಷಿಕರು ಮನೆಯಲ್ಲಿ ತಮ್ಮ ಮಾತೃಭಾಷೆಗಳ ಜೊತೆಗೆ ಇತರ ಭಾಷೆಗಳನ್ನು ಆಡಿದರೆ, ಕನ್ನಡ ಮಾತೃಭಾಷಿಕರು ಕನ್ನಡವನ್ನು ಮಾತ್ರ ಬಳಸುವುದು ಕಂಡು ಬರುತ್ತದೆ. ಕೊಡವ ಮಾತೃಭಾಷಿಕರು ತಮ್ಮ ಭಾಷೆಯನ್ನು ಉಳಿಸಿಕೊಳ್ಳಲು ಹೆಚ್ಚಿನ ಒತ್ತು ನೀಡಿದರೆ, ಮಲಯಾಳಂ, ಮತ್ತು ತುಳು ಮಾತೃಭಾಷಿಕರು ತಮ್ಮ ಮಾತೃಭಾಷೆಯನ್ನು ಕ್ರಮೇಣ ಕಳೆದು ಕೊಳ್ಳುತ್ತಾರೆಂದು ಅಧ್ಯಯನ ತಿಳಿಸುತ್ತವೆ. ಇದಕ್ಕೆ ಕಾರಣ, ಅವರು ಇತರ ಬಲಾಢ್ಯ ಭಾಷೆ (ಕನ್ನಡ-ಕೊಡವ)ಗಳನ್ನು ಬಳಸುತ್ತಿರುವುದು ಎಂಬುದು. ಇದರ ಜೊತೆಗೆ ಇವರು ರೇಡಿಯೋ, ವೃತ್ತಪತ್ರಿಕೆ, ಸಮೂಹ ಮಾಧ್ಯಮಗಳಿಗೆ ಸಹಾ ಕನ್ನಡ ಬಳಸುವುದರ ಮೂಲಕ ಕನ್ನಡಕ್ಕೆ ಹೆಚ್ಚಿನ ಆದ್ಯತೆ ಕೊಡುವುದು. ಈ ಲೇಖನದ ಪ್ರಕಾರ ಮಲಯಾಳಂ, ತುಳು ಭಾಷೆಯನ್ನಾಡುವವರು ಕನ್ನಡದ ಬಗ್ಗೆ ಗೌರವವನ್ನು ಹೊಂದಿರುವದನ್ನು ಕಾಣಬಹು ದಾಗಿದೆ. ಕೊಡವ, ಮಲಯಾಳಂ, ತುಳು ಮಾತೃಭಾಷಿಕರು ಕನ್ನಡ ಕಲಿಯುವುದು ಸುಲಭ ವೆಂದು ಹೇಳಿ ಸಕಾರಾತ್ಮಕವಾದ ಮನೋಭಾವ ಹೊಂದಿದ್ದಾರೆ.

ಮೇಲಿನ ಅಧ್ಯಯನಗಳನ್ನು ಗಮನಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಕನ್ನಡದ ಹಿತಾಸಕ್ತಿಗೆ ಪೂರಕವಾದ ಸಂಗತಿಗಳು ಮರಾಠಿ (ಮಹಾರಾಷ್ಟ್ರ) ಮತ್ತು ತೆಲುಗು (ಆಂಧ್ರ ಪ್ರದೇಶ) ಮಾತನಾಡುವ ಗಡಿಪ್ರದೇಶಗಳಲ್ಲಿ ಕಂಡುಬರುವುದಿಲ್ಲ. ಇದಕ್ಕೆ ಕಾರಣ ಆಯಾ ಭಾಷೆಗಳ ಪ್ರಭಾವ ಬಹಳ ಕಾಲದಿಂದಲೂ ಇರುವುದು ಮತ್ತು ಆ ಭಾಷೆಗಳನ್ನು ಉಳಿಸಿ ಕೊಳ್ಳಲು ಪೂರಕವಾದ ಸ್ಥಿತಿ ಇರುವುದು. ಮತ್ತು ಕನ್ನಡವನ್ನು ಬಳಸಲೇಬೇಕೆಂಬ ನಿರ್ವಾಹ ಸ್ಥಿತಿ ಉಂಟಾಗದಿರುವುದು. ಆದರೆ ಕೊಡಗಿನಲ್ಲಿ ಹೀಗಾಗಲಿಲ್ಲ. ಅಲ್ಲಿ ಕನ್ನಡವೇ ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ಪ್ರಾಬಲ್ಯವನ್ನು ಹೊಂದಿರುವುದರಿಂದ ಕನ್ನಡ ಭಾಷೆಯ ಬೆಳವಣಿಗೆ ತೃಪ್ತಿಕರವಾಗಿದೆ.

ಇತ್ತೀಚಿನ ಕನ್ನಡದ ಬೆಳವಣಿಗೆಗಾಗಿ ಕೈಗೊಂಡ ಕ್ರಮಗಳಿಂದಾಗಿ ಕನ್ನಡ ಭಾಷೆಯ ಸ್ಥಿತಿ ಚೇತರಿಸುತ್ತಿದೆಯೆಂಬುದಾಗಿ ಅಭಿಪ್ರಾಯ ಪಡಲಾಗಿದೆ. ಕನ್ನಡವನ್ನು ಶಿಕ್ಷಣದಲ್ಲಿ ಕಡ್ಡಾಯಗೊಳಿಸಿದ್ದು, ಆಡಳಿತದ ಎಲ್ಲಾ ಹಂತಗಳಲ್ಲೂ ಕನ್ನಡವನ್ನೇ ಅನುಷ್ಠಾನಗೊಳಿಸಿರು ವುದು ಕನ್ನಡದ ಅಭಿವೃದ್ಧಿಗೆ ಸಹಾಯಮಾಡಿದೆ. ತೆಲುಗು ಪ್ರಭಾವಿತ ಪ್ರದೇಶಗಳ ಇತ್ತೀಚಿನ ಸ್ಥಿತಿಯನ್ನು ಗಮನಿಸಿದಾಗ ಎಲ್ಲಾ ವ್ಯವಹಾರಗಳಲ್ಲೂ ಕನ್ನಡ ಬಳಸುತ್ತಿರುವುದು ಗೋಚರಿ ಸುತ್ತಿದೆ. ಆದರೂ ಇಂತಹ ಗಡಿ ಪ್ರದೇಶಗಳಲ್ಲಿ ಕನ್ನಡದ ಬಳಕೆಗೆ ಪೂರಕವಾಗುವಂತಹ ತರಬೇತಿ, ಕನ್ನಡ ಬಳಕೆಗೆ ಪ್ರೋತ್ಸಾಹಗಳ ನೀಡಿಕೆ, ಇತ್ಯಾದಿ ಉತ್ತೇಜಕ ಕೆಲಸಗಳನ್ನು ಕೈ ಗೊಂಡಾಗ ಮಾತ್ರ ಕನ್ನಡ ಭಾಷೆ ಸುಪುಷ್ಟವಾಗಲು ಸಾಧ್ಯ.

ಇನ್ನೂ ಒಂದು ಸಂಗತಿಯೆಂದರೆ, ಕೇವಲ ಸರ್ಕಾರದ ಕೆಲಸವಷ್ಟೇ ಅಲ್ಲದೆ ಸಾರ್ವಜನಿ ಕರೂ ಸಹಾ ಕನ್ನಡದ ಅಭಿವೃದ್ಧಿಗೆ ಕಂಕಣಬದ್ಧರಾಗಬೇಕು. ಕರ್ನಾಟಕದ ಜನ ವಿಶಾಲ ಹೃದಯಿಗಳು. ನಮ್ಮ ನೆರೆಯವರನ್ನು ಸೌಹಾರ್ದವಾಗಿ ಕಾಣುವುದು ನಮ್ಮ ಸಂಸ್ಕೃತಿಯ ಲಕ್ಷಣ. ಕನ್ನಡಿಗರಲ್ಲಿರುವ ಅನ್ಯ ಭಾಷೆಗಳನ್ನು ತನ್ನೊಳಗೆ ಹೀರಿಕೊಳ್ಳುವ, ಬೆಳೆಯುವ ದೊಡ್ಡತನ, ಧಾರಾಳತೆಗಳು ಅನ್ಯಭಾಷಿಕರು ಕನ್ನಡ ಕಲಿಯುವತ್ತ ಇರುವ ದೊಡ್ಡ ತೊಡಕಾ ಗಿದೆ. ಏಕೆಂದರೆ, ಕನ್ನಡ ಭಾಷಿಕರೇ ತಮಗೆ ಬಂದೂ ಬಾರದ ರೀತಿಯಲ್ಲಿಯೇ ಬೇರೆ ಭಾಷೆ ಯಲ್ಲಿ ಮಾತಾಡಲು ತೊಡಗುತ್ತಾರೆ. ಅದೂ ಅಲ್ಲದೆ, ಮಾರುಕಟ್ಟೆ ಇತ್ಯಾದಿ ವ್ಯಾಪಾರ ವಹಿವಾಟುಗಳಲ್ಲಿ ಗಿರಾಕಿಗಳನ್ನು ಆಕರ್ಷಿಸಲು ಗಿರಾಕಿಗಳ ಭಾಷೆಯ ಬಳಕೆಯೇ ನಡೆಯು ವುದು, ಕನ್ನಡ ಕಲಿಯಲೇಬೇಕೆಂಬ ನಿರ್ವಾಹ ಸ್ಥಿತಿ ಉಂಟಾಗದಿರುವುದು ಕನ್ನಡದ ಅಭಿವೃದ್ಧಿ ಕುಂಠಿತವಾಗಲು ಕಾರಣವಾಗಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂಥ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ–ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ ಸಂಸ್ಕೃತ ದ್ವಿಭಾಷಾ ಸಂದರ್ಭ. ಇಂದಿನದು ಕನ್ನಡ–ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪ 'ಸ್ವದೇಶಿ ಸತ್ಯ'ಗಳನ್ನು ಶೋಧಿಸುವುದು.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಇತ್ತೀಚಿನ ಪುಸ್ತಕ, 'ಕನ್ನಡ ಭಾಷಾಭಿವೃದ್ಧಿ: ಸಾಧನೆ ಮತ್ತು ಮುನ್ನೋಟ'.

ಭಾಷೆ ಸಂಸ್ಕೃತಿಯ ಶಬ್ದರೂಪ. ಪ್ರಗತಿ–ವಿಗತಿ ಅದರ ಲಕ್ಷಣಗಳು. ಈ ತಿಳುವಳಿಕೆಯನ್ನು ಭಿತ್ತಿಯಾಗಿಟ್ಟುಕೊಂಡು ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನವಾಗಿದೆ 'ಕನ್ನಡ ಭಾಷಾಭಿವೃದ್ಧಿ : ಸಾಧನೆ ಮತ್ತು ಮುನ್ನೋಟ'. ಈ ಕೃತಿಯನ್ನು ಅನನ್ಯ ಆಸಕ್ತಿಯಿಂದ ರೂಪಿಸಿದ ಡಾ. ಕೆ.ವಿ. ನಾರಾಯಣ ಅವರಿಗೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ.

ಎಂ. ಎಂ. ಕಲಬುರ್ಗಿ
ಕುಲಪತಿಗಳು